

೩೯೮

# ಮಾನವ ಆರೋಗ್ಯ ಮತ್ತು ರೋಗರುಜಿನಗಳು

ಪ್ರಾ. ವ್ಹಿ. ಪಿ. ದೇಶಮುಖ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಡಿಶಂಬರ, ೧೯೮೮

೩೯೮

# ಮಾನವ ಆರೋಗ್ಯ ಮತ್ತು ರೋಗರುಜಿನಗಳು

ಪ್ರೊ. ವ್ಹಿ. ಪಿ. ದೇಶಮುಖ




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಡಿಶಂಬರ, ೧೯೮೮

ಪ್ರಕಾಶಕರು :

ಎಸ್. ಬಿ. ನಾಯಕ
ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಡಿಶೆಂಬರ, ೧೯೮೮



ಬೆಲೆ : ರೂ. ೧—೦೦

ಮುದ್ರಕರು :

ರಾಜಶ್ರೀ ಪ್ರಿಂಟಿಂಗ ಪ್ರೆಸ್
ಕಡಕೋಡ ಗಲ್ಲಿ, ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ ಉಪನ್ಯಾಸ ಗ್ರಂಥಮಾಲೆ ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ ದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೯೭ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರ ಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಜಿ. ಕೆ. ನಾರಾಯಣ ರೆಡ್ಡಿ
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ೩೫೦ ನೆಯ ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರ ದಿನಾಂಕ ೨೯-೭-೮೫ ರಂದು ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನ ಕಂದಗಲ್ಲದಲ್ಲಿ ಶ್ರೀವಿಜಯ ಮಹಾಂತೇಶ ತರುಣ ಸಂಘದ ಆಶ್ರಯದಲ್ಲಿ ಜರುಗಿತು. ಅಂದು ನಾನು "ಮಾನವ ಆರೋಗ್ಯ ಮತ್ತು ರೋಗ ರುಜಿನಗಳು" ಎಂಬ ವಿಷಯ ಕುರಿತು ಮಾಡಿದ ಉಪನ್ಯಾಸದ ವಿಸ್ತಾರವೇ ಇಂದು ಈ ಚಿಕ್ಕ ಪುಸ್ತಕದ ರೂಪ ತಳೆದಿದೆ.

ಅಂದು ಶ್ರೀವಿಜಯ ಮಹಾಂತೇಶ ತರುಣ ಸಂಘದ ಪದಾಧಿಕಾರಿಗಳು ಮತ್ತು ಸದಸ್ಯರು ಈ ಉಪನ್ಯಾಸಗಳ ಬಗ್ಗೆ ಸಾಕಷ್ಟು ಪ್ರಚಾರಕೊಟ್ಟು, ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲ ವಯಸ್ಸಿನ ಜನರನ್ನು ಆಕರ್ಷಿಸಿದ್ದರು. ಅಂದು ಮಳೆ ನಮ್ಮ ಕಾರ್ಯಕ್ರಮವನ್ನು ಸ್ವಲ್ಪ ಅಸ್ತವ್ಯಸ್ತಗೊಳಿಸಿದರೂ, ವಿಷಯವನ್ನು ಅರಿತುಕೊಳ್ಳುವ ಜನರ ತವಕ, ಉತ್ಸಾಹ ಕಡಿಮೆ ಆಗಿರಲಿಲ್ಲ. ಅಂದಿನ ಸಮಾರಂಭದ ಅಧ್ಯಕ್ಷತೆ ಹುನಗುಂದ ತಾಲೂಕಿನ ಬಿ. ಡಿ. ಓ. ಶ್ರೀ ಎನ್.ಡಿ. ದೊಡ್ಡನಿಂಗಪ್ಪನವರು ವಹಿಸಿದ್ದರು.

ಮನುಷ್ಯನು ಹುಟ್ಟಿದಾಗಿನಿಂದಲೂ ರೋಗರುಜಿನಗಳೊಡನೆ ಸಂಘರ್ಷ ಮಾಡುತ್ತಲೇ ಬಂದಿದ್ದಾನೆ. ಇಂದು ನಾವು ಬಹಳಷ್ಟು ರೋಗ ರುಜಿನಗಳ ಮೇಲೆ ಹತೋಟಿ ಹಾಗು ನಿವಾರಣೋಪಾಯಗಳನ್ನು ಕಂಡು ಹಿಡಿದಿದ್ದೇವೆ. ಆದರೂ ನಮ್ಮ ನಾಡಿನ ಗ್ರಾಮಸ್ಥರು ರೋಗ ರುಜಿನಗಳ ಬಗ್ಗೆ, ಅವುಗಳಿಗೆ ಕಾರಣವಾದಂಥ ಜೀವಾಣುಗಳ ಜೀವನ ಚಕ್ರದ ಬಗ್ಗೆ, ಅವುಗಳ ಹರಡುವಿಕೆಯನ್ನು ಯಶಸ್ವಿಯಾಗಿ ತಡೆಯುವ ಜ್ಞಾನದಿಂದ ದೂರ ಇದ್ದಾರೆ. ಅವೆಲ್ಲವುಗಳನ್ನು ಸಂಕ್ಷಿಪ್ತವಾಗಿ ಜನರ ಗಮನಕ್ಕೆ ತರಲು ನಾನು ಈ ಕಿರುಹೊತ್ತಿಗೆಯಲ್ಲಿ ಪ್ರಯತ್ನ ಮಾಡಿದ್ದೇನೆ. ಚಿಕಿತ್ಸೆಗಿಂತ ಮುಂಜಾಗ್ರತೆಯೇ ಲೇಸು (Prevention is better than cure) ಎಂಬ ನಾಡು ನುಡಿಯಂತೆ ನಾವು ಸಾಮಾನ್ಯವಾಗಿ ನಮ್ಮ ಪರಿಸರ ಸ್ವಚ್ಛವಾಗಿಟ್ಟಲ್ಲಿ ನಮ್ಮಿಂದ ರೋಗ ರುಜಿನಗಳು ದೂರ ಎಂಬ ಅಂಶವನ್ನು ಇಲ್ಲಿ ಒತ್ತಿ ಹೇಳಿದ್ದೇನೆ.

ಈ ಉಪನ್ಯಾಸ ಮಾಲಿಕೆಯಲ್ಲಿ ಪಾಲ್ಗೊಳ್ಳಲು ಪ್ರೇರೆಪಿಸಿದ ಶ್ರೀ ಎಸ್. ಬಿ. ನಾಯಕ. ನಿರ್ದೇಶಕರು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ ಇವರನ್ನು ಈ ಸಂದರ್ಭದಲ್ಲಿ ತುಂಬು ಹೃದಯದಿಂದ ನೆನೆಸುತ್ತೇನೆ. ಹಾಗೆಯೇ ನನ್ನ ಆತ್ಮೀಯ ಗೆಳೆಯರಾದ ಅದೇ ಶಾಖೆಯ ಸಹಾಯಕ ನಿರ್ದೇಶಕರಾದ ಶ್ರೀ ಲಿಂಗರಾಜ ಗುಡ್ಡೀನ ಅವರ ಸಹಕಾರ, ಸಹಾಯ ಮರೆಯುವಂತಿಲ್ಲ. ಈ ಕಿರುಹೊತ್ತಿಗೆಯನ್ನು ಸಕಾಲದಲ್ಲಿ ಪ್ರಕಟಿಸಲು ಇವರೀರ್ವರು ನೀಡಿದ ಪ್ರೋತ್ಸಾಹ, ಸಹಕಾರಗಳಿಗೆಲ್ಲ

ನನ್ನ ಕೃತಜ್ಞತೆಗಳು. ಇದೇ ಸಮಯದಲ್ಲಿ ಮಿತ್ರರಾದ ಶ್ರೀ ಸುರೇಶ ಕುಲಕರ್ಣಿಯವರು ಸಕಾಲದಲ್ಲಿ ಯೋಗ್ಯ ಚಿತ್ರಗಳನ್ನು ತೆಗೆದುಕೊಟ್ಟದ್ದಕ್ಕಾಗಿ ಹಾಗು ಡಾ. ಎಸ್. ಬಸಲಿಂಗಪ್ಪಾ, ರೀಡರ, ಪ್ರಾಣಿಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರು ಕಿರುಹೊತ್ತಿಗೆಯ ಹಸ್ತಪ್ರತಿಯಲ್ಲಿ ಉಪಯುಕ್ತ ಬದಲಾವಣೆ ಮಾಡಲು ಸಲಹೆ ಇತ್ತಿದ್ದಕ್ಕೆ ಅಭಿನಂದಿಸುವೆನು.

ವ್ಹಿ. ಪಿ. ದೇಶಮುಖ

ಪ್ರಾಣಿಶಾಸ್ತ್ರ ವಿಭಾಗ,
ಕರ್ನಾಟಕ ವಿಜ್ಞಾನ ಮಹಾವಿದ್ಯಾಲಯ,
ಧಾರವಾಡ
೧೯-೧೦-೮೫

# ಪರಿವಿಡಿ



ವಿ. ಸೂ : ಪುಟ ೫ರಲ್ಲಿ ಮುದ್ರಣಗೊಂಡ ಚಿತ್ರಕ್ಕೆ ಸಂಬಂಧಿಸಿದ ಮತ್ತೊಂದು ಚಿತ್ರವು ಪುಟ ೨೨ರಲ್ಲಿ ಮುದ್ರಣಗೊಂಡಿದೆ. ದಯವಿಟ್ಟು ಸರಿಪಡಿಸಿ ಓದುವುದು.

# ೧. ಪೀಠಿಕೆ

ಮಾನವನ ಹುಟ್ಟಿನೊಂದಿಗೆ ರೋಗ ರುಜಿನಗಳು ಹುಟ್ಟಿಕೊಂಡಿವೆ. ಮೊದಲು, ರೋಗ ರುಜಿನಗಳ ಬಗ್ಗೆ ಇರುವ ಅಜ್ಞಾನದಿಂದ ಸಾಕಷ್ಟು ಜನರು ಸಾಯುತ್ತಿದ್ದರು. ಆದರೆ ಮಾನವನ ಸಂಸ್ಕೃತಿಯು ಬೆಳವಣಿಗೆಯೊಂದಿಗೆ ಅವನು ತನ್ನ ಅನಾರೋಗ್ಯದ ಕಾರಣ ಹುಡುಕಲು ಮತ್ತು ಅವುಗಳ ನಿವಾರಣೋಪಾಯದ ಬಗ್ಗೆ ಚಿಂತಿಸತೊಡಗಿದನು. ಮುಂದೆ ಕ್ರಮೇಣ ವಿಜ್ಞಾನದ ಸಂಶೋಧನೆಗಳಿಂದ ಮಾನವನು ರೋಗ ರುಜಿನಗಳ ಮೇಲೆ ಸಾಕಷ್ಟು ಹತೋಟಿ ಸಾಧಿಸಿದ್ದಾನೆ. ಹೋದ ಶತಮಾನದಲ್ಲಿ ಫ್ರೆಂಚ ವಿಜ್ಞಾನಿಯಾದ ಲುಯಿಸ್ ಪ್ಯಾಸ್ಚ್ಯುರನು (Louis Pasteur) ಗಾಳಿಯಲ್ಲಿರುವ ಬ್ಯಾಕ್ಟೀರಿಯಾ ಮತ್ತು ವೈರಸಗಳಂಥ ಸೂಕ್ಷ್ಮ ಜೀವಿಗಳು ನಿಸ್ಸಂದೇಹವಾಗಿ ಮಾನವ-ನಿಗೆ ಅನೇಕ ರೋಗ ರುಜಿನಗಳನ್ನು ತರುತ್ತವೆ ಎಂದು ಸಾಧಿಸಿದ್ದಾನೆ. ಮಾನವ ಕುಲಕ್ಕೆ ಅವನು ಕೊಟ್ಟ ಕಾಣಿಕೆ ಬಹಳ ಮಹತ್ವದ್ದು. ಅವನ ಸಂಶೋಧನೆ. ಆರೋಗ್ಯ ವಿಜ್ಞಾನದ ಸಂಶೋಧನೆಗೆ ನಾಂದಿ ಹಾಕಿತು. ಜೀವ ವಿಜ್ಞಾನಿಗಳು ತಮ್ಮ

ಆಮೋಘ ಸಂಶೋಧನೆಗಳಿಂದ ಒಂದು ಕಾಲಕ್ಕೆ ವ್ಯಾಪಿಯಾಗ ದುಥ ಟೈಫಾಯಿಡ (Typhoid), ಟಿ.ಬಿ. (Tuberculosis), ಪ್ಲೇಗ, ಕಾಲರಾಗಳಂಥ ರೋಗಗಳನ್ನು ಹತೋಟಿಗೆ ತರಲು ಮಾನವನು ಯಶಸ್ವಿಯಾಗಿದ್ದಾನೆ. ಇಂದು ಸುಮಾರು ಎಲ್ಲ ರೋಗ ರುಜಿನಗಳ ಲಕ್ಷಣಗಳು, ಅವುಗಳ ಸೋಂಕು ತಗಲುವ ಬಗೆ, ಅವುಗಳಿಗೆ ಸೂಕ್ತ ಸಮಯದಲ್ಲಿ ಉಪಚಾರ ಮುಂತಾದ ವಿಷಯಗಳನ್ನು ನಾವು ಬಲ್ಲೆವು. ಆದ್ದರಿಂದ ಎಲ್ಲ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ನಾಗರಿಕರ ಜೀವನ ವಯಸ್ಸು ಹೆಚ್ಚಾಗಿದೆ. ಮಕ್ಕಳು ಬೆಳೆಯುವ ಹಂತದಲ್ಲಿ ಅನೇಕ ರೋಗ ರುಜಿನಗಳಿಗೆ ತುತ್ತಾಗುತ್ತಿದ್ದರು. ಆ ಪರಿಸ್ಥಿತಿ ಇನ್ನಿಲ್ಲ, ಆದರೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಗ್ರಾಮೀಣ ಭಾಗದಲ್ಲಿಯ ಜನ ಜೀವನ ಇನ್ನೂ ಸುಧಾರಿಸಿಲ್ಲ. ಇಂದಿಗೂ ಅವರಲ್ಲಿ ರೋಗ ರುಜಿನಗಳ ಬಗ್ಗೆ ಅಜ್ಞಾನ ತುಂಬಿದೆ. ಆದ್ದರಿಂದ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಅವರ ಅಜ್ಞಾನ ಹೊಡೆದೋಡಿಸುವಲ್ಲಿ ಸಕ್ರಿಯ ಪಾತ್ರ ವಹಿಸಿದರೆ ಮಹಾತ್ಮಾ ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸು ನನಸಾಗಬಹುದು.

ಗ್ರಾಮೀಣ ಭಾಗದ ಜನರ ಜೀವನ ಸರಳ ಹಾಗೂ ಅವರ ಬೇಡಿಕೆ. ಇಚ್ಛೆಗಳಿಗೆ ಇತಿಮಿತಿಗಳಿವೆ. ಅವರಿಗೆ ಅತಿ ಶುದ್ಧವಾದ ಹವೆ ಲಭ್ಯವಿದೆ.ಅವರಿಗೆ ಮೂಲಭೂತ ಬೇಡಿಕೆಗಳಾದ ಆಹಾರ, ಮನೆ, ಬಟ್ಟೆ ಅವರ ಶಾರೀರಿಕ ದುಡಿಮೆಯ ಫಲವಾಗಿ ಲಭ್ಯ ವಾಗುತ್ತದೆ. ಅವರು ಕಾಲ್ಪನಿಕ ಜಗತ್ತಿನ, ಹೆಚ್ಚಿನ ಬೇಡಿಕೆಗಳು ಹಿಂದೆ ಬಿದ್ದು, ತಮ್ಮ ಮನಸ್ಸಿನ ನೆಮ್ಮದಿ ಕಳೆದುಕೊಳ್ಳುವದಿಲ್ಲ.

ಆದ್ದರಿಂದ ಅವರು ಹೃದಯದ ರೋಗ, ರಕ್ತದ ಒತ್ತಡ ಹಾಗು ಮಾನಸಿಕ ವಿಕೃತ್ತುಗಳಿಂದ ದೂರ ಇದ್ದಾರೆ. ಇದರ ಬದಲಾಗಿ ಅವರು ಸಾಮಾನ್ಯವಾಗಿ ಕರುಳಿನ ರೋಗಕ್ಕೆ ತುತ್ತಾಗುತ್ತಾರೆ. ಕಲುಷಿತ ಆಹಾರ ಮತ್ತು ನೀರುಗಳಿಂದ ಭೇದಿ, ಕಾಲರಾ ಟೈಫಾಯಿಡ, ಕಾಮಲಾಲೆ ಮುಂತಾದ ಭಯಾನಕ ರೋಗಗಳು ಬರುತ್ತವೆ ಎಂದು ಅವರಿಗೆ ಗೊತ್ತಿಲ್ಲ. ಆದ್ದರಿಂದ ಅವರು ಅಪಮೃತ್ಯುವಿಗೆ ತುತ್ತಾಗುತ್ತಾರೆ. ಜನರು ತಮ್ಮ ಆರೋಗ್ಯದ ಜೊತೆಗೆ ಪರಿಸರ ಮಾಲಿನ್ಯಗೊಳ್ಳದಂತೆ ನೋಡಿಕೊಳ್ಳಬೇಕು.

ಸಾಂಕ್ರಾಮಿಕ ರೋಗಗಳನ್ನು ಹಾಗು ಇತರ ರೋಗ ಗಳನ್ನು ನೊಣ, ಜೊಂಡಿಗ, ತಲೆಹೇನು, ಚಿಕ್ಕಾಡು ಮತ್ತು ಸೊಳ್ಳೆಗಳು ಹರಡಿಸುತ್ತವೆ. ಆದ್ದರಿಂಡ ಅವು ಮಾನವನ ಕಡು ವೈರಿಗಳಾಗಿವೆ. ಅವು ಗ್ರಾಮೀಣ ಭಾಗದಲ್ಲಿಯೇ ಬೆಳೆ ಯಲಿ ಅಥವಾ ನಗರಗಳಲ್ಲಿಯೇ ಬೆಳೆಯಲಿ ಅವುಗಳ ಸಂತತಿ ನಿರ್ನಾಮ ಮಾಡಿದಲ್ಲಿ ನಾವು ಆನೆಕಾಲಿನರೋಗ, ಮಲೇ ರಿಯಾ, ಟೈಫಾಯಿಡ, ಕಾಲರಾ ಮುಂತಾದ ರೋಗಗಳ ಹರಡುವಿಕೆಯನ್ನು ತಡೆಯಬಹುದು. ಹಾಗೆಂದಮೇಲೆ ನಾವು ಎಲ್ಲ ರೋಗ ರುಜಿನಗಳ ಸೋಂಕುವಿಕೆಯಿಂದ ದೂರ ಸರಿದಿ ದ್ದೇವೆ ಎಂದರ್ಥವಲ್ಲ. ಮೇಲೆ ಹೇಳಿದ ಕೀಟಗಳು ರೋಗ ತರುವ ಸೂಕ್ಷ್ಮ ಜೀವಿಗಳ ವಾಹಕಗಳಾಗಿವೆ. ಗಾಳಿಯಲ್ಲಿ ಅನೇಕ ತರದ ರೋಗ ರುಜಿನಗಳನ್ನು ತರುವಂಥ ಬ್ಯಾಕ್ಟಿ ರಿಯಾ ವೈರಸಗಳಂಥ ಸೂಕ್ಷ್ಮ ಜೀವಿಗಳಿರುತ್ತವೆ. ಇದಲ್ಲದೆ ಕುಲುಷಿತ ಆಹಾರ ಮತ್ತು ಕುಲುಷಿತ ನೀರಿನಿಂದ ಅನೇಕ ರೋಗಗಳು ಮಾನವನಿಗೆ ಬರುತ್ತವೆ.

ಈ ಕಿರುಹೊತ್ತಿಗೆಯು ಉದ್ದೇಶವೇನೆಂದರೆ ನಮ್ಮ ಗ್ರಾಮೀಣ ಭಾಗದ ಜನರಿಗೆ ಮೇಲೆ ಹೇಳಿದ ಅನೇಕ ರೋಗ ರುಜಿನಗಳ ಬಗ್ಗೆ ತಿಳಿಸಿ ಹೇಳಬೇಕು. ಅವರು ತಮ್ಮ ಪರಿಸರ ಸ್ವಚ್ಛವಾಗಿಟ್ಟುಕೊಂಡಲ್ಲಿ ತಮ್ಮ ಆಹಾರ ಮತ್ತು ನೀರು ಕಲು ಷಿತಗೊಳ್ಳದಂತೆ ನೋಡಿಕೊಂಡಲ್ಲಿ ಅವರು ತಮ್ಮ ಆರೋಗ್ಯ ಕಾಯ್ದುಕೊಂಡು ತಮ್ಮ ಮಕ್ಕಳ ಅಪಮೃತ್ಯುವನ್ನು ತಪ್ಪಿಸ ಬಹುದು. ನಾನು ಕೆಳಗೆ ಎಲ್ಲ ರೋಗಗಳನ್ನು, ಅವುಗಳ ಲಕ್ಷಣ, ಹರಡುವಿಕೆಯನ್ನು ಸಂಕ್ಷಿಪ್ತದಲ್ಲಿ ನಿವೇದಿಸಿದ್ದೇನೆ. ಈ ಸಂದರ್ಭದಲ್ಲಿ ಇಂಗ್ಲಿಷ ಭಾಷೆಯ ಎರಡು ನಾಣ್ಣುಡಿಗಳನ್ನು ಉಲ್ಲೇಖಿಸಲು ಇಚ್ಛಿಸುತ್ತೇನೆ. ಆರೋಗ್ಯವೆ ನಮ್ಮ ಭಾಗ್ಯ (Health is Wealth) ನಾವು ಒಳ್ಳೆಯ ಆರೋಗ್ಯ ಕಾಯ್ದು ಕೊಳ್ಳದಿದ್ದರೆ, ನಾವು ಕೋಟ್ಯಾಧೀಶರಾದರೂ ಏನು ಪ್ರಯೋಜನ? ಸಂಪತ್ತಿನ ಸುಖ ಅನುಭವಿಸಬೇಕಾದರೆ ಒಳ್ಳೆಯ ಆರೋಗ್ಯ ಬೇಕು. ಆಂಗ್ಲಭಾಷೆಯ ಇನ್ನೊಂದು ನಾಣ್ಣುಡಿ ಯಂತೆ ಚಿಕಿತ್ಸೆಗಿಂತ ಮುಂಜಾಗ್ರತೆಯೇ ಲೇಸು. ಅಂದರೆ Prevention is better than cure ಎಂದರ್ಥ. ನಾವು ಅನೇಕ ರೋಗಗಳಿಗೆ ತುತ್ತಾಗಿ ಕಷ್ಟಕಾರ್ಪಣ್ಯಗಳನ್ನು ಅನು ಭವಿಸುವುದಕ್ಕಿಂತ, ಅವು ಬರದಂತೆ, ಸೋಂಕದಂತೆ ನೋಡಿ ಕೊಳ್ಳುವುದು ಯೋಗ್ಯ. ಆದ್ದರಿಂದ ನಾವು ಸಾಮಾನ್ಯ ರೋಗಗಳ ಗುಣ ಲಕ್ಷಣಗಳು, ಅವುಗಳ ಹರಡುವಿಕೆಯ ಬಗೆ, ರೋಗತಡೆಯುವ ಮುಂಜಾಗರೂಕತೆ ಹೊಂದಿದ್ದರೆ ನಮ್ಮ ಬಾಳು ಸಂತೋಷಕರವಾಗುವುದು.

## ೨. ಭೇದಿ

## (Amoebic dysentery, Diarrhoea)

ಈ ರೋಗ ಎಂಟ ಅಮೀಬಾ ಎಂಬ ಸೂಕ್ಷ್ಮ ಜೀವಿಯಿಂದ ಬರುತ್ತದೆ. ಇವು ತಮ್ಮ ರಕ್ಷಕ ಪೊರೆ ಸಹಿತ (along with cyst wall) ಭೇದಿಯೊಂದಿಗೆ ಮಣ್ಣನ್ನು ಸೇರುತ್ತವೆ. ಇಂಥ ಮಲದ ಮೇಲೆ ಜೊಂಡಿಗ ಅಥವಾ ನೊಣಗಳಂಥ ಕೀಟಗಳು ಅಡ್ಡಾಡಿದಾಗ ಎಷ್ಟೋ ಎಂಟ ಅಮೀಬಾಗಳು ಅವುಗಳ ಕಾಲುಗಳಿಗೆ ಅಂಟಿಕೊಂಡಿರುತ್ತವೆ. ಮುಂದೆ ಇವು ಆಹಾರ ಪದಾರ್ಥಗಳ ಮೇಲೆ ಅಡ್ಡಾಡಿದಾಗ ಕಾಲಿಗೆ ಅಂಟಿಕೊಂಡಿರುವ ಎಂಟಿ ಅಮೀಬಾಗಳು ಆಹಾರ ಪದಾರ್ಥಗಳ ಮೇಲೆ ಬಿಡುಗಡೆಯಾಗಿರುತ್ತವೆ. ಅಂಥ ಆಹಾರ ಆರೋಗ್ಯವಂತ ಸೇವಿಸಿದಾಗ ಅವನ ಜಠರ ಸೇರುತ್ತವೆ. ಅಲ್ಲಿನ ಕಿಣ್ವಗಳು ಅವುಗಳ ರಕ್ಷಕ ಪೊರೆಯನ್ನು ಕರಗಿಸಲಾರವು.



ಕರುಳಿನಲ್ಲಿ ಎಂಟಮೀಬಾಗಳ ಹುಣ್ಣು

ಮುಂದೆ ಅವು ಸಣ್ಣ ಕರುಳನ್ನು ಸೇರಿದಾಗ ಅಲ್ಲಿನ ಟ್ರಿಪ್ಸಿನ (Trypsin) ಕಿಣ್ವ ರಕ್ಷಕ ಪೊರೆಯನ್ನು ಕರಗಿಸಿದಾಗ ಅವುಗಳ ಬಿಡುಗಡೆ ಸಣ್ಣ ಕರುಳಿನಲ್ಲಿ ಆಗುತ್ತದೆ. ಇದಲ್ಲದೆ ಎಂಟಿ ಅಮೀಬಾಗಳುಳ್ಳ ಮಣ್ಣು ನೀರಿನೊಂದಿಗೆ ಅಥವಾ ಆಹಾರ ದೊಂದಿಗೆ ಬೆರೆತಾಗ ಅವು ಸಣ್ಣ ಕರುಳನ್ನು ಸೇರಿ ಮುಂದೆ ದೊಡ್ಡ ಕರುಳನ್ನು ಸೇರುತ್ತವೆ.

ಈಗ ಅವು ದೊಡ್ಡ ಕರುಳಿನಲ್ಲಿ ಪ್ರಜನನ ಕ್ರಿಯೆಯಿಂದ ತೀವ್ರ ಗತಿಯಲ್ಲಿ ಸಂಖ್ಯೆ ಹೆಚ್ಚಿಸಿ, ಕರುಳಿನ ಪೊರೆ ಕೊರೆದು. ಅಲ್ಲಿನ ಕೋಶಗಳನ್ನು ನಾಶಮಾಡಿ ರಕ್ತಪರಿಚಲನಾಂಗದಲ್ಲಿ ಸೇರುತ್ತವೆ. ಇಲ್ಲಿ ಅವು ಕೆಂಪು ರಕ್ತಕಣಗಳನ್ನು ತಿನ್ನಲು ಪ್ರಾರಂಭಿಸುತ್ತವೆ. ಇವುಗಳಿಂದ ಕರುಳಿನಲ್ಲಿ ಅನೇಕ ಹುಣ್ಣುಗಳಾಗಿ (ulcers) ಬೇರೆ ರೋಗಗಳು ಸೋಂಕುವ ಸಾಧ್ಯತೆ ಹೆಚ್ಚು. ಈಗ ರೋಗಿಯು ರಕ್ತ ಕೂಡಿದ ಭೇದಿ ಮಾಡಲು ಪ್ರಾರಂಭಿಸುವನು. ಸಕಾಲದಲ್ಲಿ ಯೋಗ್ಯ ಔಷಧಿಯಿಂದ ಇವು-ಗಳನ್ನು ನಿಯಂತ್ರಿಸದಿದ್ದರೆ ರಕ್ತ ಹಾಗೂ ದೇಹದಲ್ಲಿನ ನೀರಿನ ಅಂಶ ಕಡಿಮೆ ಆಗಿ, ಸಾಯುವ ಹಂತಕ್ಕೆ ಬರುತ್ತಾನೆ. ಇವು ಕರುಳಿನಲ್ಲಿ ಅಲ್ಲದೆ, ರಕ್ತದೊಂದಿಗೆ ದೇಹದ ಇತರ ಭಾಗಗಳಾದ ಪಿತ್ತ ಜನಕಾಂಗ, ಪುಪ್ಪುಸ, ಮೆದುಳುಗಳಿಗೆ ಹೋಗಿ ಹುಣ್ಣು ಗಳನ್ನಾಗಿ ಮಾಡುತ್ತವೆ. ಇದರಿಂದ ಮೇಲೆ ಹೇಳಿದ ದೇಹದ ಭಾಗಗಳಲ್ಲಿ ಬೇರೆ ಬೇರೆ ರೋಗ ಜಂತುಗಳು ಸೇರಿ ಹೊಸ ಹೊಸ ರೋಗ ಬರುವ ಸಾಧ್ಯತೆ ಹೆಚ್ಚು. ಕರುಳಿನಲ್ಲಿರುವ ಹುಣ್ಣುಗಳಿಂದ ಅಲ್ಲಿ ಪಚನವಾದ ಆಹಾರ ರಕ್ತ ಸೇರದೆ ಭೇದಿಯು

ರೂಪದಲ್ಲಿ ದೇಹದ ಹೊರ ಹೋಗುತ್ತದೆ. ಇದಲ್ಲದೆ ಅವು ಹೊಸ ಹೊಸ ಕೆಂಪು ರಕ್ತಕಣಗಳನ್ನು ನುಂಗುವ ಕ್ರಿಯೆಯನ್ನು ಅವ್ಯಾಹತವಾಗಿ ಮುಂದೆ ನಡೆಸುತ್ತವೆ.

ಈ ರೀತಿಯಾಗಿ ಸೂಕ್ಷ್ಮ ಜೀವಿಯಾದ ಎಂಟ ಅಮೀಬಾ ಎಂಥ ಶಕ್ತಿ ಶಾಲಿಯಾಗಿರುವ ಮನುಷ್ಯನನ್ನೂ ಕೂಡ ಕೆಲವೇ ದಿವಸಗಳಲ್ಲಿ ನಿಶ್ಕ್ರಿಯನನ್ನಾಗಿ ಮಾಡುತ್ತವೆ. ಇವು ಮನುಷ್ಯ ನನ್ನಲ್ಲದೆ, ನಾಯಿ, ಬೆಕ್ಕು, ಮಂಗ, ಮತ್ತು ಗೋರಿಲ್ಲಾ, ಚಿಂಪಾಂಝಿ, ಇಲಿಗಳಲ್ಲಿ ಕೂಡ ಈ ರೋಗ ತರುತ್ತವೆ. ಈ ರೋಗದ ಹರಡುವಿಕೆ ಜಗತ್ತಿನ ಎಲ್ಲೆಡೆಗಳಲ್ಲಿ ಇದೆ.

ಸಕಾಲದಲ್ಲಿ ಈ ರೋಗವನ್ನು ಯೋಗ್ಯ ಔಷಧಿಗಳಿಂದ ತಡೆಯದಿದ್ದರೆ ಇವುಗಳ ಸಂಖ್ಯೆ ಶರೀರದ ಬೇರೆ ಬೇರೆ ಭಾಗ ಗಳಲ್ಲಿ ಹೆಚ್ಚಾಗಿ ಬೆಳೆದು ಇವುಗಳ ನಿಯಂತ್ರಣ ಕಠಿಣವಾಗು ತ್ತದೆ. ಆಗ ಇದಕ್ಕೆ ಕ್ರೊನಿಕ ಅಮೀಬಿಕ ಡಿಸೆಂಟ್ರಿ (Chronic amoebic dysentery) ಎಂದು ಕರೆಯುವದುಂಟು.

## ೩. ಕಾಲರಾ (Cholera)

ಮಳೆಗಾಲ ಪ್ರಾರಂಭವಾದೊಡನೆ, ಕಾಲರಾ ರೋಗ ದೇಶದ ವಿವಿಧ ಕಡೆಗೆ ಹರಡುವುದು. ಆದ್ದರಿಂದ ಮಳೆಗಾಲಕ್ಕೂ ಮತ್ತು ಕಾಲರಾ ರೋಗ ಹರಡುವಿಕೆಗೂ ಸಂಬಂಧ ಇರುವುದು ಇದರಿಂದ ಗೊತ್ತಾಗುತ್ತದೆ. ಈ ರೋಗವು ಸೂಕ್ಷ್ಮ ದರ್ಶಿಗಳಾದ ವಿಶಿಷ್ಟ ಬ್ಯಾಕ್ಟಿರಿಯಾಗಳಿಂದ ಬರುತ್ತದೆ. ಇವು

ಕಲುಷಿತ ಆಹಾರ ಮತ್ತು ನೀರಿನಿಂದ ಆರೋಗ್ಯವಂತನ ಶರೀರ ವನ್ನು ಸೇರುತ್ತವೆ. ಇವು ರೋಗಿಯ ವಾಂತಿ ಭೇದಿಯ ಮೇಲೆ ನೊಣಗಳು ಕುಳಿತಾಗ ಅವುಗಳ ಕಾಲಿಗೆ ಈ ಬಾಕ್ಟಿರಿಯಾಗಳು ಅಂಟಿಕೊಂಡು ಮುಂದೆ ಇವು ಸಿದ್ಧ ಆಹಾರದ ಮೇಲೆ ಕುಳಿತಾಗ ನೂರಾರು ಬ್ಯಾಕ್ಟಿರಿಯಗಳು ಅಂಥ ಆಹಾರದ ಮೇಲೆ ಬಿಡ ಲ್ಪಡುತ್ತವೆ. ಅಂಥ ಕುಲುಷಿತ ಆಹಾರ ಆರೋಗ್ಯವಂತನ ದೇಹ ಸೇರಿ ಅವುಗಳ ಸಂಖ್ಯೆ ಎಷ್ಟೊ ಪಟ್ಟು ಬೆಳೆದು, ದೇಹದ ಬೇರೆ ಬೇರೆ ಭಾಗಕ್ಕೆ ಹೋಗುತ್ತವೆ. ಆದರೆ ಅವು ಅವನ ಅನ್ನ ನಾಳದಲ್ಲಿ ಕೇಂದ್ರಿಕೃತಗೊಂಡು ಅಲ್ಲಿನ ಜೀವಕೋಶಗಳನ್ನು ನಾಶ ಮಾಡುವವು. ಆದ್ದರಿಂದ ಅನ್ನ ನಾಳದಲ್ಲಿ ಬಂದ ಆಹಾರ ಪಚನವಾಗದೇ, ದೇಹಗತವಾಗದೇ ಭೇದಿಯ ರೂಪದಲ್ಲಿ ಹೊರ ಹೋಗುವುದು.

ಈ ರೋಗದ ಲಕ್ಷಣಗಳೆಂದರೆ ರೋಗಿಯು ಸತತ ವಾಂತಿ ಭೇದಿಯಿಂದ ಒಂದೇ ದಿವಸದಲ್ಲಿ ಹಣ್ಣಾಗಿ ಹೋಗುವನು. ರೋಗಿಯು ದ್ರವರೂಪದ ಆಹಾರವನ್ನೆ ತೆಗೆದು ಕೊಳ್ಳಲಿ, ಘನರೂಪದ ಆಹಾರವನ್ನೆ ತೆಗೆದು ಕೊಳ್ಳಲಿ ರೋಗಾಣುಗಳು ಹೆಚ್ಚಿನ ಸಂಖ್ಯೆಯಲ್ಲಿ ಇರುವುದರಿಂದ ಆಹಾರ ಜಠರದಲ್ಲಿ ನಿಲ್ಲದೇ ವಾಂತಿಯ ರೂಪದಲ್ಲಿ ಹೊರಹಾಕಲ್ಪಡುತ್ತದೆ.

ಇಂಥ ಪರಿಸ್ಥಿತಿಯಲ್ಲಿ ರೋಗಿಯನ್ನು ಕೂಡಲೇ ಆಸ್ಪ ತ್ರೆಗೆ ರವಾನಿಸಬೇಕು. ಏಕೆಂದರೆ ಅವನ ಶರೀರದ ನೀರಿನ ಅಂಶ ಬಹಳ ಕಡಿಮೆ ಆಗಿ ಬೇರೆ ಬೇರೆ ಸಂಸ್ಥೆಗಳ ಕಾರ್ಯ ನಿರ್ವಹಣೆ ಕುಂಠಿತವಾಗುತ್ತದೆ. ದೇಹದ ಎಲ್ಲ ಭಾಗಗಳಿಂದ

ಎಲ್ಲ ಕೋಶಿಕೆಗಳಿಂದ ನೀರಿನ ಅಂಶ ರಕ್ತದ ಮುಖಾಂತರ ವಾಂತಿಯ ರೂಪದಲ್ಲಿ ಹೊರಹೋಗುವುದು. ಆದ್ದರಿಂದ ರೋಗಿಯನ್ನು ಕೂಡಲೇ ಆಸ್ಪತ್ರೆಗೆ ಸೇರಿಸಿ ಯೋಗ್ಯ ಉಪಚಾರ ಮಾಡಿಸಿ ಅವನ ರಕ್ತನಾಳಗಳ ಮುಖಾಂತರ ಗ್ಲುಕೋಜ ನೀರನ್ನು ಸೇರಿಸುವ ವ್ಯವಸ್ಥೆ ಮಾಡಿದಲ್ಲಿ ದೇಹದಿಂದ ಹೋದ ನೀರಿನ ಅಂಶವು ಪುನಃ ರಕ್ತಗತವಾಗಿ, ಅವನ ಆರೋಗ್ಯ ಕ್ರಮೇಣ ಸುಧಾರಿಸುವುದು.

ಈ ರೋಗದ ಹರಡುವಿಕೆಯನ್ನು ತಡೆಯಲು ಆರೋಗ್ಯ ಅಧಿಕಾರಿಗಳು ಮಾರುಕಟ್ಟೆಯಲ್ಲಿ ತೆರೆದಿಟ್ಟು ಮಾರುವ ಸಿದ್ಧ ಆಹಾರ ಪದಾರ್ಥಗಳನ್ನು ನಾಶಮಾಡಿ ಮುಂದೆ ಅಂಥ ಆಹಾರ ಪದಾರ್ಥಗಳನ್ನು ಮಾರಲು ನಿರ್ಬಂಧ ಹಾಕಬೇಕು. ಅಲ್ಲದೆ ಕಾಲರಾ ನಿರೋಧಕ ಚುಚ್ಚು ಮದ್ದು ಎಲ್ಲ ನಾಗರಿಕರಿಗೆ ಒದಗಿಸಬೇಕು. ಕುಡಿಯುವ ನೀರು ಮತ್ತು ಆಹಾರ ಯಾವ ಹಂತದಲ್ಲಿಯೂ ಕಲುಷಿತವಾಗದಂತೆ ನೋಡಿಕೊಳ್ಳಬೇಕು. ನಾಗರಿಕರು ತಮ್ಮ ಕುಟುಂಬದ ಯಾವ ಸದಸ್ಯನಿಗೇ ಆಗಲಿ ಕಾಲರಾ ರೋಗದ ಲಕ್ಷಣಗಳು ಕಂಡು ಬಂದಲ್ಲಿ ಕೂಡಲೇ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಿಂದ ತಪಾಸಣೆ ಮಾಡಿಸಿ ಅವರ ನಿರ್ದೇಶನಗಳಂತೆ ನಡೆದುಕೊಂಡಲ್ಲಿ, ಹೆಚ್ಚಿನ ಸಂಖ್ಯೆಯಲ್ಲಿ ಈ ಭಯಂಕರ ರೋಗಕ್ಕೆ ಕುಟುಂಬದವರು ತುತ್ತಾಗುವುದನ್ನು ತಡೆಯಬಹುದು. ರೋಗಿಗೆ ಬಿಸಿ ನೀರನ್ನು ತಣ್ಣಗೆ-ಗೊಳಿಸಿ ಕುಡಿಯಲು ಕೊಡಬೇಕು. ಅವನ ವಾಂತಿಭೇದಿಯನ್ನು ರೋಗಾಣುಗಳನ್ನು ನಾಶಮಾಡುವ ದ್ರಾವಣಗಳಿಂದ ನಾಶಮಾಡಿ ಅವನ ಹಾಸಿಗೆ, ಬಟ್ಟೆಗಳನ್ನು ಕುದಿಯುವ ನೀರಿನಲ್ಲಿ ತೋಯಿಸಿ

ಸ್ವಚ್ಛಗೊಳಿಸಬೇಕು. ಇದಲ್ಲದೆ ಈ ರೋಗದ ಹರಡುವಿಕೆಗೆ ಕಾರಣವಾದಂಥ ನೊಣಗಳನ್ನು ಮತ್ತು ಜೊಂಡಿಗಗಳನ್ನು ನಾಶಮಾಡಬೇಕು.

ಮೊದ ಮೊದಲು ಈ ರೋಗ ಜನರಲ್ಲಿ ಭೀತಿಯನ್ನೇ ಹುಟ್ಟಿಸಿತ್ತು. ಏಕೆಂದರೆ ಈ ರೋಗ ಕಂಡುಬಂದಾಗ ಕೆಲವೇ ದಿನಗಳಲ್ಲಿ ವ್ಯಾಪಕವಾಗಿ ಹರಡಿ ಸಾವಿರಾರು ಸಂಖ್ಯೆಯಲ್ಲಿ ಜನರ ಬಲಿ ತೆಗೆದುಕೊಳ್ಳುತಿತ್ತು. ಆದರೆ ವಿಜ್ಞಾನದ ಸಂಶೋಧನೆಗಳ ಫಲವಾಗಿ ಈ ರೋಗವಲ್ಲದೆ, ಅನೇಕ ಭಯಂಕರ ರೋಗಗಳ ತಡೆಯುವಿಕೆಗೆ ತಕ್ಕ ಚುಚ್ಚು ಮದ್ದು, ಔಷಧಿಗಳು ಲಭ್ಯ ಇವೆ. ಆದ್ದರಿಂದ ಮೊದಲಿನಂತೆ ಗಾಬರಿ ಗೊಳ್ಳುವ ಸ್ಥಿತಿ ಈಗಿಲ್ಲ. ಆದರೂ ಸೂಕ್ತ ಸಮಯದಲ್ಲಿ ಯೋಗ್ಯ ಉಪಚಾರ ರೋಗಿಗೆ ಒದಗಿಸುವುದು ಸರ್ಕಾರದ ಮತ್ತು ನಾಗರಿಕ ಸಂಘ ಸಂಸ್ಥೆಗಳ ಜವಾಬ್ದಾರಿಯಾಗಿದೆ.

## ೩. ಮಲೇರಿಯಾ (ಚಳಿಜ್ವರ)

ಜೀವ ವಿಕಾಸದಲ್ಲಿ ಮೊದಲು ಸೊಳ್ಳೆಗಳು ಹುಟ್ಟಿವೆ. ಆದಾದ ಎಷ್ಟೋ ವರ್ಷಗಳ ನಂತರ ಮನುಷ್ಯನು ಹುಟ್ಟಿದ್ದಾನೆ. ಮನುಷ್ಯನ ಹುಟ್ಟಿನೊಂದಿಗೆ ಮಲೇರಿಯಾ ರೋಗ ಸಂಬಂಧ ಬೆಳೆದುಬಂದಿದೆ. ನಾವು ಇತಿಹಾಸದ ಪುಟಗಳನ್ನು ತಿರುವಿದಾಗ ರೋಮ್ ಮತ್ತು ಗ್ರೀಕ ಸಾಮ್ರಾಜ್ಯಗಳು ಈ ರೋಗದಿಂದ ತತ್ತರಿಸಿ ಹೋದದ್ದು ಕಂಡುಬರುತ್ತದೆ. ರೋಮನ್‌ರು ಆಫ್ರಿಕಾ ಖಂಡದಿಂದ ಗುಲಾಮರನ್ನು ಕೆಲಸದ ಸಲುವಾಗಿ

ತಂದಾಗ ಅವರಿಂದ ಈ ರೋಗ ಯೂರೋಪ ಖಂಡಕ್ಕೆ ಬಂತು. ಈ ನಿಗ್ರೊ ಗುಲಾಮರಿಂದ ಗ್ರೀಕ ಮತ್ತು ರೋಮನ್ ಸಾಮ್ರಾಜ್ಯಗಳ ಸೈನಿಕರು ಹಾಗು ನಾಗರಿಕರು ಚಳಿಜ್ವರದ ಬಾಧೆ ಪಡೆದು ಸಾವಿರಾರು ಸಂಖ್ಯೆಯಲ್ಲಿ ಸತ್ತರು. ಈ ರೋಗ ಜನರಲ್ಲಿ ಭಯಂಕರ ಭೀತಿಯನ್ನು ಹುಟ್ಟಿಸಿತ್ತು. ಮೊದ ಮೊದಲು ಮಲೇರಿಯಾ ರೋಗ ಕೆಟ್ಟಗಾಳಿಯಿಂದ ಬರುತ್ತದೆ ಎಂದು ನಂಬಿ ಇದಕ್ಕೆ ಮಲೇರಿಯಾ ಎಂದು ಕರೆದರು. ಮುಂದೆ ಸೊಳ್ಳೆಗಳು ಹೆಚ್ಚಾಗಿರುವುದಕ್ಕೂ, ಈ ರೋಗ ಬರುವುದಕ್ಕೂ ಸಂಬಂಧ ಇರುವುದು ಗೊತ್ತಾಯಿತು. ಬ್ರಿಟಿಷ ಸೈನ್ಯದಲ್ಲಿ ಡಾಕ್ಟರಾಗಿದ್ದ ಸರ್ ರೋನಾಲ್ಡ ರುಸ್ಸರು, ಈ ಸೂಕ್ಷ್ಮ ರೋಗಾಣುವನ್ನು ರೋಗಿಯ ರಕ್ತದಲ್ಲಿ ಕಂಡು, ಈ ರೋಗಾಣುವಿನ ಜೀವನ ಚಕ್ರ ಅಭ್ಯಾಸ ಮಾಡುವುದರಲ್ಲಿ ಬೇರೆ ವಿಜ್ಞಾನಿಗಳಿಗೆ ನೆರವಾದರು.

ಈ ರೋಗವನ್ನು ಹತೋಟಿಗೆ ತರಲು ಈಗ ಸಾಕಷ್ಟು ಔಷಧಿಗಳಿದ್ದರೂ, ಜಗತ್ತಿನ 1/4 ಜನಸಂಖ್ಯೆ ಈ ರೋಗದಿಂದ ಬಳಲುತ್ತಿದೆ. ಕೇವಲ ಭಾರತದಲ್ಲಿಯೇ ಪ್ರತಿ ವರ್ಷ 10 ಲಕ್ಷ ಜನ ಈ ರೋಗದಿಂದ ಬಳಲುತ್ತಾರೆ. ಇದಕ್ಕೆ ಈ ರೋಗದ ಬಗ್ಗೆ ಇರುವ ಅಜ್ಞಾನವೇ ಕಾರಣ. ಗ್ರಾಮೀಣ ಭಾಗದಲ್ಲಿ ವಾಸಿಸುವ ಜನರ ಪರಿಸರ ಆರೋಗ್ಯಕರವಾಗಿರುವುಲ್ಲ. ಅಲ್ಲಲ್ಲಿ ನೀರು ನಿಂತು ಸೊಳ್ಳೆಗಳ ಜನ ಸಂಖ್ಯೆ ಬೆಳೆಯಲಿಕ್ಕೆ ಅನುಕೂಲ ವಾಗಿರುತ್ತದೆ. ಮಲೇರಿಯಾ ಜೀವಾಣು ತನ್ನ ಜೀವನ ಚಕ್ರ ವನ್ನು ಮನುಷ್ಯ ಮತ್ತು ಸೊಳ್ಳೆಗಳಲ್ಲಿ ಮುಗಿಸುತ್ತದೆ. ಆದರೆ ಜೀವನ ಚಕ್ರದಲ್ಲಿ ಬರುವ ಆಶ್ರಯ ಜೀವಿಯಾದ

ಸೊಳ್ಳೆಗಳಿಗೆ ಯಾವ ತರದ ತೊಂದರೆ ಆಗುವದಿಲ್ಲ. ಮಲೇರಿಯಾ ರೋಗಾಣುಗಳು ಮನುಷ್ಯನ ಪಿತ್ತ ಜನಕಾಂಗದ ಕೋಶಗಳನ್ನು ಮತ್ತು ರಕ್ತ ಕಣಗಳನ್ನು ನಾಶಮಾಡುವವು. ಅವುಗಳು ಬಿಡುವ ವಿಷದ್ರವಗಳಿಂದ ಮನುಷ್ಯನಿಗೆ ಚಳಿಜ್ವರ ಬರುವುದು.

ಪೋಷಕ ಜೀವಿಯ ಕೋಶಿಕೆಗಳಲ್ಲಿರುವ ಪ್ಲಾಸ್ಮೊಡಿಯಂ ರೋಗಾಣು, ಮನುಷ್ಯನ ಕೆಂಪು ರಕ್ತ ಕಣಗಳಲ್ಲಿ ಜೀವಿಸುತ್ತದೆ. ತನ್ನ ಜೀವನ ಚಕ್ರದ ಕೆಲವು ಘಟ್ಟಗಳನ್ನು ಮನುಷ್ಯನ ಕೆಂಪು ರಕ್ತ ಕಣಗಳಲ್ಲಿಯೂ. ಮಿಕ್ಕ ಕೆಲವು ಘಟ್ಟಗಳನ್ನು ಹೆಣ್ಣು ಅನೊಫೆಲಿಸ ಸೊಳ್ಳೆಯ ಜೀರ್ಣಾಂಗಗಳಲ್ಲಿಯೂ ಕಳೆಯುತ್ತದೆ. ಸ್ಥೂಲವಾಗಿ ಈ ರೋಗಾಣುವಿನ ಜೀವನ ಚಕ್ರವನ್ನು ಎರಡು ಭಾಗಗಳಾಗಿ ವಿಭಾಗಿಸಬಹುದು. ನಿರ್ಲಿಂಗ ರೀತಿಯನ್ನನುಸರಿಸಿ ಸೋಂಕು ಹರಡುವ ಭಾಗವು ಸೊಳ್ಳೆಯ ಜೀರ್ಣಾಂಗಗಳಲ್ಲಿ ನಡೆಯುತ್ತವೆ. ಪ್ಲಾಸ್ಮೋಡಿಯಮದ ಜೀವನ ಚಕ್ರವು ಮುಖ್ಯ ಪೋಷಕ ಜೀವಿಯಾದ ಮನುಷ್ಯನಲ್ಲಿಯೂ ಮತ್ತು ಉಪಮುಖ್ಯ ಪೋಷಕ ಜೀವಿಯಾದ ಅನೊಫೆಲಿಸ ಹೆಣ್ಣು ಸೊಳ್ಳೆಯಲ್ಲಿಯೂ ನಡೆಯುವುದರಿಂದ ಇದರ ಅಭ್ಯಾಸವು ಸ್ವಲ್ಪ ಕಷ್ಟದಾಯಕವೇ ಸರಿ. ಇದರ ಜೀವನ ಚಕ್ರವು ಕೆಳನಗಿನ ನಾಲ್ಕು ಹಂತಗಳಲ್ಲಿ ಅಭ್ಯಾಸಿಸಬಹುದು,

೧. **ಕೆಂಪು ರಕ್ತ ಕಣಗಳಲ್ಲಿಯಕ್ಕಿಂತ ಮೊದಲಿನ ಹಂತ :** ಹೆಣ್ಣು ಅನೊಫೆಲಿಸ ಸೊಳ್ಳೆಯು ಮೊಟ್ಟೆ ಇಡುವುದಕ್ಕಿಂತ ೩–೪ ದಿವಸಗಳ ಮುಂಚೆ ಮನುಷ್ಯನ ರಕ್ತ ಹೊಟ್ಟೆ

ತುಂಬ ಹೀರುತ್ತದೆ. ಸೊಳ್ಳೆಯು ಕಡಿದ ಮನುಷ್ಯನು ಚಳಿ ಜ್ವರದಿಂದ ಬಳಲುತ್ತಿರಲು ಅವನ ರಕ್ತದಲ್ಲಿರುವ ಈ ರೋಗಾ ಣುವಿನ ಜೀವನ ಚಕ್ರದ ಕೆಲವು ಘಟ್ಟಗಳು ಸೊಳ್ಳೆಯ ಹೊಟ್ಟೆಯನ್ನು ಸೇರುತ್ತವೆ. ಸೊಳ್ಳೆಯ ಹೊಟ್ಟೆಯಲ್ಲಿ ಮುಂದೆ ಬೆಳೆಯುವ ಘಟ್ಟಗಳು ಸೊಳ್ಳೆಯು ಮತ್ತೊಬ್ಬ ಆರೋಗ್ಯ ವಂತನನ್ನು ಕಚ್ಚಿದಾಗ ಅದರ ಲಾಲಾರಸದೊಡನೆ ಅವನ ರಕ್ತಕ್ಕೆ ಸಾವಿರಾರು ಸ್ಪೊರೊ ಝೊ ಆಯಿಟ್ಸಗಳು (Sparozoites) ಸೇರುವವು. ಸೊಳ್ಳೆಯು ಕಡಿದ ಸ್ಥಳದಲ್ಲಿ ರಕ್ತ ನಾಳಗಳು ಉಬ್ಬುವವು.

ಈಗ ಈ ಸ್ಪೋರೋ ಝೊ ಆಯಿಟ್ಸಗಳು ಆತನ ರಕ್ತವನ್ನು ತೊರೆದು ಅವನ ಯಕೃತ್‌ನ್ನು ತಲುಪುತ್ತವೆ. ಅಲ್ಲಿ ೧೦–೧೪ದಿವಸಗಳವರೆಗೆ ಇದ್ದು ದೊಡ್ಡ ಗಾತ್ರವುಳ್ಳ ಸೇಝಂಟ (Schizont) ಹಂತಕ್ಕೆ ತಲುಪುತ್ತವೆ. ಈಗ ಪ್ರತಿಯೊಂದು ಸೇಝಂಟದಿಂದ ೧೦೦೦-೧೨೦೦ ಮೀರೊ ಝೊ ಆಯಿಟ್ಸಗಳು (Merozoites) ಹುಟ್ಟುತ್ತವೆ. ಈ ಹಂತದಲ್ಲಿ ಅವುಗಳಿಗೆ ಮನುಷ್ಯನಲ್ಲಿರುವ ನೈಸರ್ಗಿಕ ಪ್ರತಿರೋಧ ಶಕ್ತಿ ಮತ್ತು ಔಷಧ ಗಳೇನು ಮಾಡಲಾರವು. ಈ ರೀತಿಯಾಗಿ ಅವು ರೋಗಿಯ ಯಕೃತ್ತಿನಲ್ಲಿ ಅಸಂಖ್ಯಾತ ಸಂಖ್ಯೆಯಲ್ಲಿಯ ಬೆಳವಣಿಗೆಯ ಬಗೆಗೆ (Pre-Erythrocytic Schizogony) ಅಥವಾ ಕೆಂಪು ರಕ್ತ ಕಣಗಳಲ್ಲಿಯಕ್ಕಿಂತ ಮೊದಲಿನ ಹಂತ ಎಂದು ಹೆಸರು.

ಇದೇ ಹಂತಿನ ಮತ್ತೊಂದು ಉಪಹಂತವಾದ (Exo-Erythrocytic Schizogong) ಕೂಡಾ ಯಕೃತ್ತಿನ ಜೀವ ಕೋಶದಲ್ಲಿಯೇ ನಡೆಯುತ್ತದೆ. ಮೊದಲನೆಯ ಹಂತದ

ಮೀರೋ ಝೂ ಆಯಿಟ್ಸ ಹೊಸ ಜೀವಕೋಶಗಳನ್ನು ಹೊಕ್ಕು ದೊಡ್ಡದಾದ ಸೇಝುಂಟ್ಸಗಳಾಗಿ ಬೆಳೆಯುತ್ತವೆ. ಪ್ರತಿಯೊಂದು ಸೇಝುಂಟ್ಸ ಮತ್ತೆ ಹಲವು ಮೀರೊ ಝೂ ಆಯಿಟ್ಸಗಳಿಗೆ ಹುಟ್ಟಿಸುತ್ತದೆ. ಹೀಗೆ ಇವುಗಳ ಸಂಖ್ಯೆ ವಿಪರೀತ ಹೆಚ್ಚಾಗಿ ಯಕೃತ್ತು ಮೀರೊ ಝೂ ಆಯಿಟ್ಸಗಳ ಆಗರವಾಗಿ (Reser-voir) ಪರಿಣಮಿಸುತ್ತದೆ. ಈ ರೀತಿಯಾಗಿ ಅವು ೧೦-೧೪ ದಿವಸಗಳವರೆಗೆ ಅಲ್ಲಿ ಅಸಂಖ್ಯಾತ ಸಂಖ್ಯೆಯಲ್ಲಿ ಬೆಳೆದು ರಕ್ತ ಕಣಗಳನ್ನು ಸೇರುತ್ತವೆ. ಈ ಅವಧಿಯಲ್ಲಿ ರೋಗಿಯೂ ಮಲೇರಿಯಾ ಜ್ವರದ ಯಾವ ಲಕ್ಷಣಗಳನ್ನು ಹೊಂದಿರುವದಿಲ್ಲ.

೨. **ಇರಿಥ್ರೊಸೈಟಿಕ್ ಅಥವಾ ಕೆಂಪು ರಕ್ತಕಣಗಳಲ್ಲಿಯ ಹಂತ :** ಅಸಂಖ್ಯಾತ ಮೀರೊ ಝೂ ಆಯಿಟ್ಸಗಳು ರೋಗಿಯ ರಕ್ತದಲ್ಲಿ ನಿರಂತರವಾಗಿ ಸಂಚರಿಸುತ್ತಿರಲು ಒಂದೊಂದು ಮೀರೊ ಝೂ ಆಯಿಟ್ಸ ಒಂದೊಂದು ಕೆಂಪು ರಕ್ತಕಣಗಳನ್ನು ಸೇರುತ್ತದೆ. ಈಗ ಅದು ತನ್ನ ಮೊದಲಿನ ಆಕಾರವನ್ನು ಕಳೆದುಕೊಂಡು ಅಮೀಬಾದಂತೆ ಮಿಥ್ಯ ಪಾದಿ ಆಗುತ್ತದೆ. ಈಗ ಈ ರೋಗಾಣುಗಳು ಆಯಾ ಕೆಂಪು ರಕ್ತ ಕಣಗಳಲ್ಲಿನ ಗ್ಲೋಬಿನ ಎಂಬ ಭಾಗ ತಿಂದು ಹಿಮ್ಯಾಟಿನ್‌ವೆಂಬ (Haematin) ತ್ಯಾಜ್ಯ ವಸ್ತುವನ್ನು ಬಿಡುತ್ತವೆ. ಈಗ ಅವು ಅಸಂಖ್ಯಾತ ಸಂಖ್ಯೆಯಲ್ಲಿ ಬೆಳೆದು ಹೊಸ ಹೊಸ ರಕ್ತ ಕಣಗಳನ್ನು ಸೇರಿ ಕೆಂಪು ರಕ್ತ ಕಣಗಳ ಸಂಖ್ಯೆ ಕಡಿಮೆ ಮಾಡುವವು. ಈ ರೋಗಾಣುಗಳು ಕೆಂಪು ರಕ್ತ ಕಣಗಳಲ್ಲಿ ಮುದ್ರೆ ಉಂಗುರದ ಆಕಾರದಲ್ಲಿ ಬೆಳೆದು, ೧೦-೧೨ ತುಂಡುಗಳಲ್ಲಿ ವಿಂಗಡಣೆಯಾಗಿ ಗುಲಾಬಿ ಹೂವಿನ ದಳಗಳಂತೆ ಜೋಡಿಸಲ್ಪಟ್ಟಿ

ರುವುದರಿಂದ ಈ ಘಟ್ಟಕ್ಕೆ(Rosettestage) ಎಂದು ಹೆಸರು. ಇದುವರೆಗೆ ಈ ರೋಗಾಣುಗಳಿಗೆ ಆಶ್ರಯ ಆಹಾರವನ್ನೊದಗಿಸಿ ಬಳಲಿ, ಬೆಂದಿದ ಕೆಂಪು ರಕ್ತಕಣಗಳು ಒಡೆದು ಸಾವಿರಾರು ಸಂಖ್ಯೆಯಲ್ಲಿ ಸೂಕ್ಷ್ಮ ಮೀರೊ ಝೂ ಆಯಿಟ್ಸಗಳ (Micro merozoites) ಬಿಡುಗಡೆಯಾಗುತ್ತವೆ. ಹೀಗೆ ಬಿಡುಗಡೆಯಾದ ಸೂಕ್ಷ್ಮ ಮೀರೊ ಝೂ ಆಯಿಟ್ಸಗಳು ಹೊಸ ಹೊಸ ಕೆಂಪು ರಕ್ತ ಕಣಗಳನ್ನು ಆಕ್ರಮಿಸಿ ತಮ್ಮ ಸಂಖ್ಯೆ ಹೆಚ್ಚಿಸಿಕೊಳ್ಳುವವು ಬೇರೆ ಬೇರೆ ಪ್ಲಾಸ್ಮೋಡಿಯಂಗಳ ಪ್ರಭೇದಗಳಲ್ಲಿ ಈ ಹಂತ ಪೂರ್ತಿಗೊಳಿಸಲು ಎರಡರಿಂದ ಹಲವು ದಿವಸಗಳು ಬೇಕಾಗುವವು. ಈ ರೋಗಾಣುಗಳು ಕೆಂಪು ರಕ್ತಕಣಗಳಲ್ಲಿ ಬೆಳೆಯುವವರೆಗೆ ರೋಗಿಗೆ ಏನು ಆಗುವದಿಲ್ಲ. ಈ ಚಕ್ರದ ಕೊನೆಯಲ್ಲಿ ಹೊಸ ಮೈಕ್ರೊಮೀರೊ ಝೂ ಆಯಿಟ್ಸ ಮತ್ತು ಹೀಮೊಝೂಯಿನ(Haemozoin)ಎಂಬ ವಿಷಕಾರಿ ತ್ಯಾಜ್ಯ ವಸ್ತುಗಳ ಬಿಡುಗಡೆಯಿಂದ ರೋಗಿಗೆ ವಿಪರೀತ ನಡುಗು ಜ್ವರ ಮತ್ತು ಬೆವರು ಬರುವುದುಂಟು. ಹೀಗೆ ಒಡೆದು ನಾಶವಾದ ರಕ್ತ ಕಣಗಳ ಶೇಷಭಾಗಗಳು ಪೋಷಕ ಜೀವಿಯ (ರೋಗಿಯ) ಮೆದುಳು. ಶ್ವಾಸಕೋಶ, ಹೃದಯ ಮೊದಲಾದ ಅಂಗಗಳ ರೋಮನಾಳಿಗಳಿಗೆ ನುಗ್ಗಿ (Capillaries) ರಕ್ತ ಪರಿಚಲನೆಗೆ ಅಡ್ಡಿಯನ್ನುಂಟುಮಾಡಿ ಅನೇಕ ಉಪವ್ಯಾಧಿಗಳಿಗೆ ಕಾರಣವಾಗುತ್ತವೆ.

೩. ಕೆಂಪು ರಕ್ತಕಣಗಳ ನಂತರದ ಹಂತ (Post-Erythrocyiestic) ಕೆಂಪು ರಕ್ತಗಣಗಳಲ್ಲಿ ಉತ್ಪತ್ತಿಯಾದ ಮೈಕ್ರೊ ಮಿರೊ ಝೂ ಆಯಿಟ್ಸಗಳು ಹಲವು ಸಾರಿ

ತಿರುಗಿ ನಿರ್ಲಿಂಗ ರೀತಿಯ ಬಹು ವಿಖಂಡನೆ ಹೊಂದಲು ತಿರುಗಿ ರಕ್ತದ ಮೂಲಕ ಯಕೃತ್ತಿಗೆ ಹೋಗುವವು. ಸಾಮಾನ್ಯ ವಾಗಿ ಈ ಹಂತದಿಂದ ಅವು ಮುಂದಿನ ಹಂತಕ್ಕೆ ಬೆಳೆಯುವವು.

೪. **ಗ್ಯಾಮೆಟೊ ಸೈಟಿಕ ಹಂತ** (Gametocytic stage) ಕೆಂಪು ರಕ್ತಕಣಗಳಲ್ಲಿಯ ಹಂತ ಕೆಲವು ಸಾರೆ ಪುನರಾ ವೃತ್ತಿಆದಂತೆ, ರೋಗಾಣುಗಳ ಸಂಖ್ಯೆ ಮಿತಿ ಮೀರಿ, ರೋಗಿಯು ಸಾವಿಗೆ ಕಾರಣವಾಗುವವು. ಇಲ್ಲವೆ ರೋಗಿಯಲ್ಲಿ ಪ್ರತಿರೋಧಕ ಶಕ್ತಿ ಹೆಚ್ಚಾಗಿ ರೋಗಾಣುಗಳು ಸಾವನ್ನಪ್ಪುವವು. ಆದುದರಿಂದ ರೋಗಾಣುಗಳು ತಮ್ಮ ಜೀವನ ಚಕ್ರವನ್ನು ಬೇರೊಂದು ದಿಕ್ಕಿಗೆ ತಿರುಗಿಸುವುದು ಅನಿವಾರ್ಯ. ಇವೆರಡು ಹಂತಗಳಿಗೆ ಅನುಕೂಲ ಅವಕಾಶಗಳಿಲ್ಲದ್ದಾಗ ಮೈಕ್ರೊ ಮೀರೊ ರುಝೂ ಆಯಿಟ್ಸಗಳು ಹೊಸ ರಕ್ತ ಕಣಗಳನ್ನು ಸೇರಿ ಮೊದಲಿನ ಹಂತ ಪುನರಾವೃತ್ತಿಮಾಡದೇ, ಕೆಂಪು ರಕ್ತಕಣಗಳಿಂದ ಹೊರ ಬಿದ್ದು ರಕ್ತ ಪ್ರವಾಹದಲ್ಲಿ ತೇಲಾಡುವವು. ಇವೇ ಪ್ರಜನನ **ಜೀವಿ ಅಥವಾ ಗ್ಯಾಮೆಟೊಸೈಟ್ಸ** (Gametocytes) ಇವುಗಳ ದೇಹ ರಚನೆಯ ಆಧಾರದ ಮೇಲೆ ಹೆಣ್ಣು ಪ್ರಜನನ ಜೀವಿ ಮತ್ತು ಗಂಡು ಪ್ರಜನನ ಜೀವಿಗಳೆಂದು ಗುರುತಿಸಬಹುದು.

ಹೆಣ್ಣು ಪ್ರಜನನ ಜೀವಿ ಗಂಡು ಪ್ರಜನನ ಜೀವಿಗಿಂತ ದೊಡ್ಡ ಗಾತ್ರ ಹೊಂದಿರುತ್ತದೆ. ಇವುಗಳ ದೇಹ ರಚನೆ ಕೂಡ ಬೇರೆ ಇರುತ್ತದೆ. ಇವೆರಡು ಪ್ರಜನನ ಜೀವಿಗಳು ರಕ್ತಕಣಗಳಲ್ಲಿ ರೂಪುಗೊಂಡರೂ ಇವುಗಳ ಜೀವನ ಚಕ್ರ ರಕ್ತ ಕಣಗಳಲ್ಲಿ ಮುಂದುವರೆಯುವದಿಲ್ಲ. ಜೀವನ ಚಕ್ರವು ಮುಂದೆ

ಸಾಗಬೇಕಾದರೆ, ಈ ಪ್ರಜನನ ಜೀವಿಗಳು ರೋಗ ವಾಹಕಗಳಾದ ಅನೊಫೆಲಿಸ ಜಾತಿಯ ಹೆಣ್ಣು ಸೊಳ್ಳೆಯ ಜೀರ್ಣಾಂಗವನ್ನು ಸೇರಬೇಕು. ಎಲ್ಲ ಜಾತಿಯ ಸೊಳ್ಳೆಗಳು ಪ್ಲಾಸ್ಮೊಡಿಯಂ ರೋಗಾಣುವಿನ ವಾಹಕಗಳಾಗಲಾರವು. ಒಂದು ವೇಳೆ ಕ್ಯುಲೆಕ್ಸ (Culex) ಜಾತಿಯ ಸೊಳ್ಳೆಯು ರೋಗಿಯ ರಕ್ತವನ್ನು ಹೀರಿದರೆ, ರಕ್ತಕಣಗಳೊಂದಿಗೆ ಎಲ್ಲ ರೋಗಾಣುಗಳು ಅವರ ಜಠರದಲ್ಲಿ ಜೀರ್ಣವಾಗುವವು. ಅನೊಫೆಲಿಸ ಜಾತಿಯ ಹೆಣ್ಣು ಸೊಳ್ಳೆ ರೋಗಿಯ ರಕ್ತವನ್ನು ಹೀರಿದಾಗ ಈ ರೋಗದ ಅನೇಕ ಹಂತಗಳು ಪ್ರಜನನ ಜೀವಿಗಳು ಅವರ ಜಠರ ಸೇರುವವು. ಅವರ ಶರೀರ ಉಷ್ಣತೆಯು ಪ್ರಜನನ ಜೀವಿಗಳಿಗೆ ಮಾತ್ರ ಪ್ರತಿರೋಧಿಸಿ ಬೆಳೆಯಲು ಅವಕಾಶಕೊಟ್ಟು ಉಳಿದ ಹಂತಗಳ ರೋಗಾಣುಗಳು ರಕ್ತಕಣಗಳೊಂದಿಗೆ ಜೀರ್ಣವಾಗುತ್ತವೆ.

ಗಂಡು ಮತ್ತು ಹೆಣ್ಣು ಪ್ರಜನನ ಜೀವಿಗಳು ಸೊಳ್ಳೆಯ ಜಠರದಲ್ಲಿ ಸಂಯೋಗ ಹೊಂದಿ, ಸ್ವಲ್ಪಕಾಲ ಅವು ಸರಿದಾಡಿ ಅವರ ಹೊಟ್ಟೆಯ ಗೋಡೆಯನ್ನು ಚೂಪಾದ ಮುಂಭಾಗದಿಂದ ಕೊರೆದು ಅಲ್ಲಿ ನೆಲೆಸುತ್ತವೆ. ಮುಂದೆ ತನ್ನ ಪ್ರಸ್ರವ ದ್ರವದಿಂದ (Secretion) ಮತ್ತು ಸೊಳ್ಳೆಯ ಹೊಟ್ಟೆಯ ಪೊರೆಯಿಂದ ಒಂದು ರಕ್ಷಾ ಕವಚವನ್ನು ತಯಾರಿಸಿ ಅದರಲ್ಲಿರುತ್ತವೆ. ಈಗ ಇವಕ್ಕೆ ಸ್ಪೊರಂಟ (Sporant) ಎಂದು ಹೆಸರು.

ಈ ಸ್ಪೊರಂಟವು ರಕ್ಷಾಕವಚದಿಂದ ಸುತ್ತಲಿನ ಕೋಶ ಜಾಲದಿಂದ ಆಹಾರ ಹೀರಿ ಬೆಳೆಯುತ್ತದೆ. ಬಹಳಷ್ಟು

ರೋಗಾಣುಗಳಿರುವ ಈ ರಕ್ಷಾ ಕವಚಗಳು (ಹುಣ್ಣುಗಳು) ಹೆಚ್ಚೆಂದರೆ 5000, ವರೆಗೆ ಇರುತ್ತವೆ. ಪೂರ್ಣ ಬೆಳವಣಿಗೆಯಾದ ಅವರ ಕೋಶಕೇಂದ್ರ ಬಹು ಭೇದನೆಹೊಂದಿ, ಪ್ರತಿಯೊಂದು ತುಂಡಿನ ಸುತ್ತಲು ಕೊಂಚ ಕೋಶದ್ರವ ಆವರಿಸಿ ಸ್ಪೋರೊ ಝೂ ಆಯಿಟ್ಸಗಳಾಗಿ ಪರಿಣಮಿಸುವವು. ನಂತರ ಅವು ಲಾಲಾಗ್ರಂಥಿಗಳಲ್ಲಿ ಶೇಖರಣೆಯಾಗುವವು. ಈಗ ಈ ಸೊಳ್ಳೆಯು ಆರೋಗ್ಯವಂತ ಮನುಷ್ಯನನ್ನು ಕಚ್ಚಿದಾಗ ಸಾವಿರಾರು ಸ್ಪೋರೊ ಝೂ ಆಯಿಟ್ಸಗಳು ಅವನ ರಕ್ತವನ್ನು ಸೇರುವವು. ಅಲ್ಲಿಂದ ಅವನ ಯಕೃತ್ತು ಸೇರಿ ಮುಂದಿನ ಜೀವನಚಕ್ರ ಮುಂದುವರೆಯುತ್ತದೆ.

ಹೀಗೆ ಮಲೇರಿಯಾ ರೋಗಾಣುವಿನ ಜೀವನಚಕ್ರವಲ್ಲಿ ಮನುಷ್ಯ ಪ್ರಮುಖ ಆಶ್ರಯ ಜೀವಿಯಾಗಿ ಹಾಗು ಹೆಣ್ಣು ಅನೊಫೆಲಿಸ ಸೊಳ್ಳೆಯು ಮಧ್ಯಮ ಪೋಷಕ ಜೀವಿಯಾಗಿ ಜೀವನ ಚಕ್ರ ಮುಗಿಸಲು ಅನುಕೂಲವಾಗಿವೆ. ಮುಖ್ಯ ಆಶ್ರಯ ಜೀವಿಯು ಅಂತ್ಯವಾದಂತೆ ಈ ರೋಗಾಣುವಿನ ಅಂತ್ಯವಾಗುವದಿಲ್ಲ ಏಕೆಂದರೆ ಸೊಳ್ಳೆಯ ಹೊಟ್ಟೆಯಲ್ಲಿ ಮತ್ತು ಲಾಲಾ ಗ್ರಂಥಿಯಲ್ಲಿ ಅವರ ಜೀವನ ಚಕ್ರದ ಕೆಲವು ಹಂತಗಳು ಇರುತ್ತವೆ. ಅಂಥ ರೋಗಾಣುಗಳುಳ್ಳ ಅನೊಫೆಲಿಸ ಹೆಣ್ಣು ಸೊಳ್ಳೆಯ ಕಡಿತದಿಂದ ಆರೋಗ್ಯವಂತ ಮನುಷ್ಯನ ರಕ್ತ ಸೇರುತ್ತವೆ. ಹೀಗಾಗಿ ಈ ರೋಗಾಣುಗಳು ಹೆಚ್ಚು ಕಡಿಮೆ ಅಮರವಿದ್ದಂತೆ ಸರಿ.

ಮಲೇರಿಯಾ ರೋಗದ ನಿಯಂತ್ರಣ (Control of malaria) ಮಲೇರಿಯಾ ರೋಗದ ನಿಯಂತ್ರಣ ನಮ್ಮ

ದೇಶದ ಸಮಸ್ಯೆಯಾಗಿರದೆ ಇಡೀ ಜಗತ್ತಿನ ಸಮಸ್ಯೆಯಾಗಿದೆ. ಸೊಳ್ಳೆಗಳು ಅಧಿಕ ಸಂಖ್ಯೆಯಲ್ಲಿರುವುದು ಮತ್ತು ಈ ರೋಗ ಹೆಚ್ಚಾಗಿರುವುದಕ್ಕೆ ಸಂಬಂಧ ಇದ್ದುದರಿಂದ, ಸೊಳ್ಳೆಗಳ ನಿಯಂತ್ರಣವಾದಾಗ ಈ ರೋಗ ಖಂಡಿತವಾಗಿಯೂ ಹಿಡಿತ ದಲ್ಲಿ ಬರುತ್ತದೆ. ಅದಕ್ಕೆ ಸೊಳ್ಳೆಗಳನ್ನು ಅವುಗಳ ಬೆಳವಣಿ ಗೆಯು ಎಲ್ಲ ಹಂತಗಳಲ್ಲಿ ನಾಶಪಡಿಸಲೇಬೇಕು.

ಮಲೇರಿಯಾ ರೋಗಿಯ ರಕ್ತದಲ್ಲಿರುವ ಈ ರೋಗಾಣು ಗಳ ನಾಶಕ್ಕೆ ಕ್ವಿನಾಯಿನ (Quinine) ಎಂಬ ಔಷಧ ರಾಮ ಬಾಣವಾಗಿ ಪರಿಣಮಿಸಿದೆ. ಇದನ್ನು ಭಾರತ, ಶ್ರೀಲಂಕಾ, ಪೇರು ಮತ್ತು ಜಾವಾಗಳಲ್ಲಿ ಸಿಗುವ ಸಿಂಕೋನಾ ಎಂಬ ಗಿಡದ ತೊಗಟೆಯಿಂದ ತಯಾರಿಸುತ್ತಾರೆ. ಇದು ರೋಗಿಯ ರಕ್ತದಲ್ಲಿರುವ ಎಲ್ಲ ಪ್ರಭೇದಗಳನ್ನು ಮತ್ತು ಎಲ್ಲ ಹಂತದಲ್ಲಿರುವ ರೋಗ ಜೀವಾಣುಗಳನ್ನು ಕೊಲ್ಲಲಾರದು. ಇತ್ತಿತ್ತಲಾಗಿ ಕ್ವಿನಾಯಿನದ ಬದಲಾಗಿ ಪ್ಯಾಲುಡ್ರಿನ (Paludrin) ಪ್ಯಾಮಾ ಕ್ವಿನ (Palmaquin) ಕ್ಯಾಮೊಪ್ರಾಯುಮಾ (Calmoprima) ಇತ್ಯಾದಿ ಔಷಧಿಗಳನ್ನು ಉಪಯೋಗಿಸುತ್ತಾರೆ. ಇವುಗಳಲ್ಲಿ ಪ್ಯಾಲುಡ್ರಿನ ಬಹಳ ಪರಿಣಾಮಕಾರಿ ಔಷಧಿಯಾಗಿರುತ್ತದೆ. ಈ ರೋಗದ ವ್ಯಾಪಕತೆಯನ್ನು ಅರಿತು ವಿಶ್ವಆರೋಗ್ಯ ಸಂಸ್ಥೆಗಳ (World Health Organization) ಈ ರೋಗ ಪೀಡಿತ ಎಲ್ಲ ದೇಶಗಳಿಗೆ ಎಲ್ಲ ತರದ ಸಹಾಯ ಸಹಕಾರಗಳನ್ನು ಕೊಡುತ್ತಿದೆ.

ಗ್ರಾಮೀಣ ಭಾಗದಲ್ಲಿಯೇ ಆಗಲಿ ಅಥವಾ ನಗರ ಭಾಗ-ದಲ್ಲಿಯೇ ಆಗಲಿ ಸಣ್ಣ ಸಣ್ಣ ತಗ್ಗು-ದಿನ್ನೆಗಳಲ್ಲಿ ನೀರು ನಿಂತು

ಸೊಳ್ಳೆಗಳ ಮರಿಗಳು ಬೆಳೆಯಲಿಕ್ಕೆ ಅನುಕೂಲವಾಗಿರುತ್ತದೆ. ಅಂಥ ಸ್ಥಳಗಳಲ್ಲಿ DDT ಅಥವಾ ಬೇರೆ ಕೀಟ ನಾಶಕಗಳನ್ನು ಸರಿಯಾಗಿ ಉಪಯೋಗಿಸಿದರೆ ಸೊಳ್ಳೆಗಳ ನಿಯಂತ್ರಣ ಸಾಧ್ಯ. ತತ್ಪರಿಣಾಮವಾಗಿ ನಾವು ಚಳಿಜ್ವರದಿಂದ ದೂರ ಇದ್ದಂತೆ ಸರಿ.

## ೪. ಕರುಳಿನಲ್ಲಿ ಜಂತುಗಳು ಬೆಳೆಯುವುದು

### (Round worm infection of intestine)

ಮನುಷ್ಯನ ಅನ್ನನಾಳದಲ್ಲಿ ಪರತಂತ್ರ ಜೀವಿಯಾಗಿ ಬೆಳೆಯುವ ಜಂತುವಿನ ಜೀವನ ಚರಿತ್ರೆ ವಿಸ್ತೃತವಾಗಿ ಅಭ್ಯಸಿಸಲಾಗಿದೆ. ಇವುಗಳು ಹೆಚ್ಚಿನ ಸಂಖ್ಯೆಯಲ್ಲಿ ಜಗತ್ತಿನ ಎಲ್ಲ ಮೂಲೆಗಳಲ್ಲಿ ವಾಸಿಸುವ ಜನರಲ್ಲಿ ಹರಡಿವೆ. ಈ ದುಂಡು ಹುಳುಗಳ ಜೀವನ ಚರಿತ್ರೆಯನ್ನು ಕೂಲಂಕಶವಾಗಿ ಅಭ್ಯಸಿಸಲಾಗಿದೆ. ಇವು ಮನುಷ್ಯನಲ್ಲದೆ ಹಂದಿ, ಆಕಳು, ನಾಯಿ, ಬೆಕ್ಕು ಮುಂತಾದ ಸಾಕು ಪ್ರಾಣಿಗಳ ಕರುಳಿನಲ್ಲಿ ಪರತಂತ್ರ ಜೀವಿಗಳಾಗಿ ವಾಸಿಸುತ್ತವೆ.

ಇವು ವಯಸ್ಕರಿಗಿಂತ ಚಿಕ್ಕ ಮಕ್ಕಳಲ್ಲಿಯೇ ಹೆಚ್ಚಾಗಿ ಇರುವವು. ಜಗತ್ತಿನ ಎಲ್ಲ ದೇಶ ವಾಸಿಗಳಲ್ಲಿ ಪರತಂತ್ರ ಜೀವಿಗಳಾಗಿ ಬಾಳುವ ಈ ಜಂತು ಹುಳುಗಳು ಭಾರತ, ಚೀನಾ, ಫಿಲಿಫಾಯಿನ್ಸ, ಕೋರಿಯಾ ಮತ್ತು ಪ್ಯಾಸಿಫಿಕ ನಡುಗಡ್ಡೆಗಳ ದೇಶಗಳಲ್ಲಿ ಹೆಚ್ಚಾಗಿ ಸಿಗುತ್ತವೆ. ಇವು ಒಬ್ಬ ಆಶ್ರಯ ಜೀವಿಯಲ್ಲಿ ನೂರಾರು ಸಂಖ್ಯೆಯಲ್ಲಿರುತ್ತವೆ.

ಇವು ಸಿಲಿಂಡರ ಆಕಾರದಲ್ಲಿ ೧೦''-೧೪'' ಇಂಚು ಉದ್ದ ವಾಗಿದ್ದು ಎರಡು ತುದಿಗಳು ಚೂಪಾಗಿರುತ್ತವೆ ಹೆಣ್ಣು ಜಂತು ಗಂಡಿಗಿಂತ ಉದ್ದವಾಗಿರುತ್ತದೆ. ಹೆಣ್ಣು ಜಂತುವಿನ ಬಾಲದ ಭಾಗ (ಹಿಂಭಾಗ) ಸರಳವಾಗಿದ್ದರೆ, ಗಂಡಿನ ಹಿಂಭಾಗದಿಂದ ೧ ಸೆ.ಮೀ ಭಾಗ ಹಿಂದೆ ತಿರುಗಿ ಕೊಕ್ಕೆ ಆಕಾರವಲ್ಲಿತ್ತದೆ. ಇವು ಬಿಳಿ ಅಥವಾ ತಿಳಿ ಗುಲಾಬಿ ಬಣ್ಣ ಹೊಂದಿರುತ್ತವೆ. ಇವುಗಳ ಮುಂಭಾಗದಲ್ಲಿ ತ್ರಿಕೋಣಾಕಾರದಲ್ಲಿರುವ ಬಾಯಿ ಇದ್ದು ಇದರ ಸುತ್ತಲು ಮೂರು ತುಟಿಗಳಿರುತ್ತವೆ. ಇವು ಪಚನವಾದ ಆಹಾರದಲ್ಲಿಯೇ ಇರುವುದರಿಂದ ಇವುಗಳಿಗೆ ಆಹಾರ ಅನಾ-ಯಾಸವಾಗಿ ಲಭ್ಯವಾಗಿರುತ್ತದೆ. ಅವು ತಮ್ಮ ಗಂಟಲಿನಿಂದ ಆಹಾರವನ್ನು ಹೀರಿ ಹಾಯಾಗಿ ಇರುವವು ಇವುಗಳಲ್ಲಿ ರಕ್ತ ಪರಿಚಲನಾ ಸಂಸ್ಥೆ ಇರುವದಿಲ್ಲ.

ಇವು ಏಕಲಿಂಗಿಗಳು, ಪ್ರೌಢ ಜಂತು (ಗಂಡು ಮತ್ತು ಹೆಣ್ಣು) ಮನುಷ್ಯನ ಸಣ್ಣ ಕರುಳಿನಲ್ಲಿರುವುದರಿಂದ ಅವುಗಳ ಸಂಯೋಗ ಅಲ್ಲಿಯೇ ನಡೆಯುತ,ದೆ. ಈ ಪ್ರಕ್ರಿಯೆಯಲ್ಲಿ ಗಂಡು ಜಂತು, ಹೆಣ್ಣು ಜಂತುವಿಗೆ ೯೦° ಕೋನದಲ್ಲಿ ಗಂಡಿನ ಕ್ಲೊಯಕಾ (Cloaca), ಹೆಣ್ಣಿನ ಜನನೇಂದ್ರಿಯ ರಂಧ್ರಕ್ಕೆ ಹೊಂದಿ ಬಿಗಿಯಾಗಿ ಅಂಟಿಕೊಂಡಿರುತ್ತದೆ. ಗಂಡಿನ ಪೀನಿಯಲ ಸ್ಪಿಕ್ಯೂಲಗಳು (Penial Spicules) ಹೆಣ್ಣು ಜನನೇಂದ್ರಿಯ ರಂಧ್ರವನ್ನು ತೆರೆದಿಡುವುದರಿಂದ ವೀರ್ಯಾಣುಗಳು ಹೆಣ್ಣಿನ ಗರ್ಭಾಶಯ ಸೇರಿ ತತ್ತಿಗಳನ್ನು ನಿಶೇಚನಗೊಳಿಸುವವು. ಅನೇಕ ಪರತಂತ್ರ ಜೀವಿಗಳು ತಮ್ಮ ವಂಶಾಭಿವೃದ್ಧಿಗೆ ಹೆಚ್ಚು

ತತ್ತಿಗಳನ್ನು ಉತ್ಪಾದಿಸುತ್ತವೆ. ಏಕೆಂದರೆ ನಿಶೇಚನಗೊಂಡ ಎಲ್ಲ ತತ್ತಿಗಳು ಬೆಳೆದು ಪ್ರೌಢ ಜಂತು ಆಗಲಿಕ್ಕೆ ಸಾಕಷ್ಟು ಅಡೆತಡೆಗಳಿರುತ್ತವೆ. ಹೀಗೆ ಬೆಳೆದು ಪ್ರೌಢವಾದ ಒಂದು ಹೆಣ್ಣು ಪ್ರತಿನಿತ್ಯ ೧೫೦೦೦, ಮಿಕ್ಕಿ ಮೊಟ್ಟೆಗಳನ್ನಿಡುವುದು. ಈ ಮೊಟ್ಟೆಗಳು ಆಶ್ರಯ ಜೀವಿಯ ಮಲದೊಂದಿಗೆ ಹೊರ ಬೀಳುವವು. ಇವು ಸಂರಕ್ಷಕ ಪೊರೆ ಹೊಂದಿದ್ದರಿಂದ ಪ್ರತಿಕೂಲ ಪರಿಸ್ಥಿತಿಗಳಲ್ಲಿಯೂ ಹಲವು ವರ್ಷಗಳವರೆಗೆ ಮಣ್ಣಿನಲ್ಲಿ ಬದುಕಿರಬಲ್ಲವು. ಈ ಸಂಯುಕ್ತ ಜೀವಾಣುಗಳು ಭ್ರೂಣವಾಗಿ



ಕರುಳಿನ ಅಂಚಿನಲ್ಲಿ ಎಂಟಮೀಬಾಗಳ ಸಂಖ್ಯೆ ಬೆಳೆಯುತ್ತಿರುವುದು.

ಬೆಳೆಯಲು ಸ್ವತಂತ್ರವಾದ ಆಮ್ಲಜನಕ, ತೇವ ಮತ್ತು ಮನುಷ್ಯನ ದೇಹಕ್ಕಿಂತ ಕೆಳಮಟ್ಟದ ಉಷ್ಣತೆಬೇಕು. ಇವು ರಸಾಯನ ಪ್ರತಿರೋಧಾತ್ಮಕ ಶಕ್ತಿ ಪಡೆದಿರುತ್ತವೆ. ಇವು ತೇವ ಇದ್ದ ಮಣ್ಣಿನಲ್ಲಿ ಕೆಲವು ತಿಂಗಳಾದರೂ ಬದುಕಬಲ್ಲವು. ಆದರೆ ಪೂರ್ಣ ಒಣ ಮಣ್ಣಿನಲ್ಲಿ ಸಾಯುವವು. ಒಂದು ವೇಳೆ ಸಂಯುಕ್ತ ಜೀವಿಗಳಿಗೆ ಉಷ್ಣತೆ, ತೇವ ಹಾಗೂ ಆಮ್ಲಜನಕ ಲಭ್ಯವಿದ್ದಲ್ಲಿ ತತ್ತಿಗಳು ವಿದಲನ ಕ್ರಿಯೆಯಲ್ಲಿ ಸಿಲುಕಿ ೧೦-೧೪ ದಿವಸಗಳಲ್ಲಿ ತಮ್ಮ ಮೊದಲನೆಯ ಹಂತದ ಬೆಳವಣಿಗೆ ಮುಗಿಸುತ್ತವೆ. ಮತ್ತೊಂದು ವಾರದಲ್ಲಿ ಎರಡನೆಯ ಹಂತದ ಲಾರವಾಗಳಾಗಿ ಮರಿಗಳು ಬೆಳೆಯುವವು. ಈ ಹಂತದಲ್ಲಿ ಕಲುಷಿತ ಆಹಾರ ಅಥವಾ ನೀರಿನೊಂದಿಗೆ ಆರೋಗ್ಯವಂತನ ಜಠರ ಸೇರುವವು. ಅಲ್ಲಿ ಅವನ ಜೀರ್ಣರಸಗಳು ಮರಿಗಳ ಸಂರಕ್ಷಕ ಪೊರೆಯನ್ನು ಕರಗಿಸಿ ಬಿಡುವವು. ಈಗ ಆಲಾರವಾಗಳು ಜನನೇಂದ್ರಿಯಗಳನ್ನು ಹೊರತು ಪಡಿಸಿ ಪ್ರೌಢಜಂತುವಿನ ಎಲ್ಲ ಅಂಗಗಳನ್ನು ಹೊಂದಿರುತ್ತವೆ.

ಇಲ್ಲಿಂದ ಈ ಮರಿಗಳು ರಕ್ತದ ಮೂಲಕ ಹೃದಯ, ಪುಪ್ಪಸ ಮುಂತಾದ ಅಂಗಗಳಲ್ಲಿ ಸಂಚರಿಸುವವು. ಇವು ಆಶ್ರಯ ಜೀವಿಯ ಪುಪ್ಪುಸದಲ್ಲಿದ್ದಾಗ ರೋಗಿಗೆ ನಿಮೋನಿಯಾದಂಥ ಸ್ಥಿತಿ ಬರುತ್ತದೆ. ಇಲ್ಲಿಯೇ ಇವು ಎರಡನೆಯ ಹಂತದ ಮತ್ತು ಮೂರನೆಯ ಹಂತದ ಮರಿಗಳಾಗಿ ಅನುಕ್ರಮವಾಗಿ ೬ ಮತ್ತು ೧೦ ದಿನದೊಳಗೆ ಅವಧಿಯಲ್ಲಿ ಮಾರ್ಪಾಡು ಹೊಂದಿ ನಾಲ್ಕನೆಯ ಹಂತದ ಮರಿಗಳಾಗಿ ಪರಿಣಮಿಸುವವು. ಮೂರ

ನೆಯ ಹಂತದ ಮರಿಗಳು ರಕ್ತದಲ್ಲಿನ ಆಹಾರಾಂಶವನ್ನು ಹೀರಿ ೧-೨mm. ಉದ್ದವಾಗಿ ಬೆಳೆಯುತ್ತವೆ.

ನಾಲ್ಕನೆಯ ಹಂತದ ಲಾರವಾಗಳು (ಮರಿಗಳು) ಮನುಷ್ಯನ ಗಾಳಿನಳಿಕೆಯ ಮೂಲಕ (Trachea) ಬಾಯಿಗೆ ಬಂದು ಅಲ್ಲಿಂದ ಗಂಟಲು ಸೇರಿದಾಗ ರೋಗಿಗೆ ಕೆಮ್ಮು ಬರುವುದು. ಆಗ ಕೆಲವು ಜಂತುಗಳು ಬಾಯಿ ಮತ್ತು ಮೂಗಿನ ರಂಧ್ರದ ಮೂಲಕ ಹೊರ ಬೀಳುವ ಸಾಧ್ಯತೆ ಹೆಚ್ಚು. ಅಲ್ಲಿಂದ ಕ್ರಮೇಣ ಜಠರದಾಟಿ ಸಣ್ಣ ಕರುಳಿನಲ್ಲಿ ಬಂದಾಗ ನಾಲ್ಕನೆಯ ಮತ್ತು ಐದನೆಯ ಹಂತದ ಮರಿಗಳಾಗಿ ಪೂರ್ಣಾವಸ್ಥೆಯನ್ನು ಹೊಂದಿ ಪ್ರೌಢ ಜಂತುವಾಗಿ ಪರಿಣಮಿಸುವವು. ಕರುಳಿನಲ್ಲಿ ಮರಿಗಳು ಬೆಳೆಯುವಾಗ ತಮ್ಮ ದೇಹದ ಕ್ಯೂಟಿಕಲ ಹೊದಿಕೆಯನ್ನು ಕಳಚಿ ಹಾಕುತ್ತವೆ. ಸೋಂಕು ತಗಲಿದಾಗಿನಿಂದ ಕರುಳನ್ನು ತ್ಯಜಿಸಿ ಪುನ: ಕರುಳನ್ನು ತಲುಪಲು ಸುಮಾರು ೧೦ ದಿವಸಗಳು ಬೇಕು.

ಸ್ಥೂಲವಾಗಿ ಹೇಳಬೇಕಾದರೆ ಇವುಗಳಿಂದ ಆಶ್ರಯದಾತನ ಜೀವಿಗೆ ಗಾಬರಿಯಾಗುವಂಥ ತೊಂದರೆಗಳೇನು ಬರುವದಿಲ್ಲ. ಪ್ರೌಢ ಜೀವಿಗಿಂತ ಮರಿಗಳಿಂದ ಬಹಳಷ್ಟು ತೊಂದರೆಗಳುಂಟು. ಮರಿಗಳು ಹೃದಯ, ಪುಪ್ಪುಸ ಮತ್ತು ಶ್ವಾಸನಾಳಗಳಲ್ಲಿ ಸಂಚರಿಸುವಾಗ ಒಳಗೆ ರಕ್ತ ಸ್ರಾವವಾಗಿ, ಜ್ವರ ಬಂದು ಅನೀಮಿಯಾ ಆಗಿ ಹಲವು ಸಾರಿ ಮಕ್ಕಳಿಗೆ ಸಾವು ಬರುವುದುಂಟು. ಪ್ರೌಢ ಜಂತುಗಳು ಸಣ್ಣ ಕರುಳಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾಗ

ಆಹಾರದ ಮುನ್ನಡೆಯನ್ನು ತಡೆದು ಸಾವನ್ನು ತರಬಹುದು. ಒಂದೊಂದು ಸಾರೆ ಜಂತುಗಳು ಯಕೃತ್ತು (Liver) ಮತ್ತು ಪಿತ್ತನಾಳಕ್ಕೆ ಹೋಗಿ ಅಲ್ಲಿನ ಕೋಶಗಳಿಗೆ ದೈಹಿಕ ಜಖಮು ಆಗಿ ಬೇರೆ ಬೇರೆ ತೊಂದರೆಗಳಿಗೆ ಅನುವು ಮಾಡಿಕೊಡುತ್ತವೆ. ಇವು



ಅಪೆಂಡಿಕ್ಸ (Appendix) ಭಾಗಕ್ಕೂ ಹೋಗಿ ಅಲ್ಲಿ ತೊಂದರೆ ಮಾಡುವವು. ಸಣ್ಣ ಕರುಳಿನಿಂದ ಇವು ಮೇಲ್ದಿಶೆಯಲ್ಲಿ ಸಂಚರಿಸಿ, ಬಾಯಿ, ಮೂಗುಗಳ ರಂಧ್ರಗಳಿಂದ ಹೊರಬಂದು ಆಶ್ರಯ ಜೀವಿಗೆ ಗಾಬರಿಗೊಳ್ಳುವಂಥ ಪರಿಸ್ಥಿತಿ ತರುತ್ತವೆ.

ಪ್ರೌಢ ಜಂತುಗಳು ಸಣ್ಣಕರುಳಿನಲ್ಲಿದ್ದರೂ, ಆಶ್ರಯ ಜೀವಿಗೆ ಬೇರೆ ಬೇರೆ ತರದ ಕಾಯಿಲೆಗಳನ್ನು ತರುವವು. ಈ ಕಾಯಿಲೆಗಳಲ್ಲಿ ಜ್ವರ, ಮೈಬೇನೆ, ಅಜೀರ್ಣ, ಹೊಟ್ಟೆಗಂಟು ಗಳು, ಕರುಳಿನಲ್ಲಿಯ ಹುಣ್ಣುಗಳು, ನರದೌರ್ಬಲ್ಯ, ವಾಂತಿ ಮುಂತಾದವುಗಳು ಮುಖ್ಯವಾಗಿವೆ. ಮಕ್ಕಳ ದೈಹಿಕ ಮತ್ತು ಮಾನಸಿಕ ಬೆಳವಣಿಗೆ ಇವುಗಳಿರುವುದರಿಂದ ಕುಂಠಿತಗೊಳ್ಳುತ್ತದೆ.

ಹೆಚ್ಚಾಗಿ ಮಕ್ಕಳು ಬೀದಿಯ ಮಣ್ಣಿನಲ್ಲಿ ಆಡುವ ವಾಡಿಕೆ. ಆ ಮಣ್ಣಿನಲ್ಲಿ ಆಶ್ರಯ ಜೀವಿಯ ಮಲದೊಂದಿಗೆ ಬಿಡುಗಡೆಯಾದ ಸಾವಿರಾರು ತತ್ತಿಗಳಿರುವುದು ಸಹಜ. ಮಕ್ಕಳು ಆಟದ ನಂತರ ಕೈ ಕಾಲುಗಳನ್ನು ಸರಿಯಾಗಿ ತೊಳೆಯದೆ ಊಟಮಾಡಿದಾಗ, ಆಹಾರದ ಜೊತೆ ಅವು ಮಕ್ಕಳ ದೇಹವನ್ನು ಸೇರಿ, ಬೆಳೆದು, ಪ್ರೌಢ ಜಂತುಗಳಾಗಿ ಬೆಳೆಯುತ್ತವೆ. ಆದ್ದರಿಂದ ಮಕ್ಕಳ ತಾಯಿ ತಂದೆಗಳು ಈ ಅಂಶ ಹಾಗೂ ಸಾಧಾರಣವಾಗಿ ಮಕ್ಕಳ ಆರೋಗ್ಯದ ಕಡೆಗೆ ಲಕ್ಷ್ಯ ಕೊಟ್ಟರೆ ಇವುಗಳ ಸೋಂಕು ಮಕ್ಕಳಿಗೆ ತಗಲುವುದಿಲ್ಲ. ಅವರ ಮಾನಸಿಕ, ದೈಹಿಕ ಆರೋಗ್ಯ ಬೆಳೆದು ಒಳ್ಳೆಯ ನಾಗರಿಕರಾಗುವರು. ಪ್ರೌಢ ಜೀವಿಗಳಲ್ಲಿ ಇವುಗಳ ಸೋಂಕು ಮನುಷ್ಯ

ಮತ್ತು ದನಗಳ ಮಲದ ಗೊಬ್ಬರವನ್ನು ಉಪಯೋಗಿಸಿ ಬೆಳೆ-
ಸಿದ ಹಸಿ ಕಾಯಿಪಲ್ಲೆಯನ್ನು ತಿಂದರೆ ಅಥವಾ ಅವುಗಳ ತತ್ತಿ
ಗಳಿರುವ ಮಲ ಕುಡಿಯುವ ನೀರಿಗೆ ಅಕಸ್ಮಾತ್ತಾಗಿ ಸೇರಿದರೆ
ಅಸಂಖ್ಯಾತ ತತ್ತಿಗಳು ಅವನ ಅನ್ನನಾಳ ಸೇರಿ ಸೋಂಕು
ತಗಲುವುದು. ಆದ್ದರಿಂದ ಎಲ್ಲರೂ ಕಚ್ಚಾ ತರಕಾರಿಯನ್ನು
ತಿನ್ನದೆ, ಸರಿಯಾಗಿ ಕುದಿಸಿ ತಿಂದ ಪಕ್ಷದಲ್ಲಿ ಸೋಂಕು ತಗಲುವ
ಸಾಧ್ಯತೆ ತೀರ ಕಡಿಮೆ. ಮಣ್ಣಿನಲ್ಲಿ ಬೆರೆತ ತತ್ತಿಗಳು ಹೊಸ
ಆರೋಗ್ಯವಂತನ ಜಠರ, ಕರುಳು ಸೇರಿ ವಿವಿಧ ಅಂಗಾಂಗ
ಗಳನ್ನು ಸುತ್ತಾಡಿ ಪ್ರೌಢ ಜೀವಿಯಾಗಿ ಬೆಳೆಯಲು ೨ ೧/೨-೩
ತಿಂಗಳು ಬೇಕು.

## ೫. ಆನೆಕಾಲು ರೋಗ (Elephantalsis)

ಮನುಷ್ಯನಲ್ಲಿ ಆನೆಕಾಲು ರೋಗವಲ್ಲದೆ ಮತ್ತೆ ಕೆಲವು
ರೋಗಗಳನ್ನು ತರುವ ಫೈಲೇರಿಯಾ ಹುಳುವಿನ ಬಗ್ಗೆ ತಿಳಿದು
ಕೊಳ್ಳುವುದು ಕುತೂಹಲಕರವಾದ ವಿಷಯವೇ ಸರಿ. ಈ ಹುಳು
ವಿನ ವೈಜ್ಞಾನಿಕ ಹೆಸರು ವಚೆರೇರಿಯಾ ಬ್ಯಾನಕ್ರೊಫ್ಟಿ(Wach
ereria bancrofti) ಎಂದು ಇದೆ. ಇದರ ಭೌಗೋಳಿಕ
ವಿಸ್ತೃತ್ವವು ಜಗತ್ತಿನ ಉಷ್ಣ ಮತ್ತು ಸಮಶೀತೋಷ್ಣ ವಾಯು
ಗಳಲ್ಲಿನ ದೇಶಗಳಿಗೆ ಸೀಮಿತವಾಗಿದೆ. ಈ ರೋಗ ಏಶಿಯಾ,
ಆಫ್ರಿಕಾ ಖಂಡಗಳ ಕರಾವಳಿಯಲ್ಲಿ ಹೆಚ್ಚಾಗಿ ಹಬ್ಬಿದೆ. ಏಶಿಯಾ
ಖಂಡದಲ್ಲಿ ಈ ರೋಗ ಭಾರತ, ಮಲಾಯಾ, ಚೀನಾ, ಜಪಾನ
ಮುಂತಾದ ದೇಶಗಳಲ್ಲಿ ವ್ಯಾಪಕವಾಗಿ ಹರಡಿರುತ್ತದೆ.

ಫೈಲೇರಿಯಾ ಹುಳುವು ಸಿಲಿಂಡರ ಆಕಾರದಲ್ಲಿದ್ದು, ಎರಡು ತುದಿಗಳು ಮೊಂಡಾಗಿರುತ್ತವೆ. ಇವು ಮನುಷ್ಯನ ರಸವಾಹಿನಿಗಳಲ್ಲಿ (Lymphatic vessels)ಹಾಗೂ ರಸವಾ-ಹಿನಿ ಗ್ರಂಥಿಗಳಲ್ಲಿ (Lymphatic glands) ಅಲ್ಲದೆ ಸ್ನಾಯು ಕೋಶಜಾಲ (Muscular tissue)ಗಳಲ್ಲಿ ಪರತಂತ್ರ ಜೀವಿಗಳಾಗಿ ಬಾಳುತ್ತವೆ. ಹೆಣ್ಣು ಜಂತುವು ೬೦–೧೦೦mm ಉದ್ದವಾಗಿದ್ದು ೦.೨೫mm, ವ್ಯಾಸಹೊಂದಿದ್ದರೆ, ಗಂಡು ೪೦mm ಉದ್ದ ಹಾಗು ೦.೧/mm ವ್ಯಾಸವುಳ್ಳದ್ದಾಗಿರುತ್ತದೆ. ಬಾಯಿ ರಂಧ್ರದ ಸುತ್ತಲು ಜಂತು ಹುಳುವಿನಂತೆ ತುಟಿಗಳಿಲ್ಲ. ಇದರ ಹಿಂದೆ ಬರುವ ಫ್ಯಾರಿಂಕ್ಸ ಅರ್ಧಸ್ನಾಯು ಪುಷ್ಟಿತವು ಹಾಗೂ ಅರ್ಧ ಗ್ರಂಥಿಯುಕ್ತವೂ ಆಗಿರುತ್ತದೆ. ಗಂಡಿನ ಹಿಂಭಾಗವು ವಕ್ರವಾಗಿದ್ದು ಅನೇಕ ಪ್ಯಾಪಿಲ್ಲಿಗಳು ಹಾಗು ಒಂದೇ ಅಳತೆಯುಲ್ಲದ ಕೊಕ್ಕೆ (Spicules) ಗಳಿರುತ್ತವೆ.

ಹೆಣ್ಣು ಫೈಲೇರಿಯಾಗಳು ತತ್ತಿಗಳನ್ನಿಡುವದಲ್ಲದೆ, ಪ್ರೌಢ ಜೀವಿಗೆ ಹೋಲುವಂಥ ಮರಿಗಳನ್ನು ದೇಹದಲ್ಲಿ ಬೆಳೆಸಿ ಹುಟ್ಟಿಸುವವು. ಇವುಗಳ ಜೀವನಚಕ್ರ ತೊಡಕಿನದ್ದಾಗಿದ್ದು, ಕ್ಯೂಲೆಕ್ಸ (Culex) ಜಾತಿಯ ಸೊಳ್ಳೆಯ ಮಧ್ಯವರ್ತಿ ಆಶ್ರಯ ಜೀವಿಯಾಗಿರುವುದು. ಹೆಣ್ಣಿನ ಗರ್ಭಾಶಯದಿಂದ ಹೊರಬೀಳುವ ಮರಿಗಳು ರಕ್ತದ ಮೂಲಕ ದೇಹದಲ್ಲಿ ಮೈಕ್ರೊ ಫೈಲೇರಿಯಾಗಳಾಗಿ (Micro filaria) ಹರಡುತ್ತವೆ. ಇವುಗಳ ಮೇಲೆ ಒಂದು ತಿಳುವಾದ ಪೊರೆ ಇರುತ್ತದೆ. ಮೈಕ್ರೊ ಫೈಲೇರಿಯಾ ಲಾರವಾದಲ್ಲಿ ಪ್ರೌಢ ಹುಳುವಿನ ಅಂಗಾಂಗಗ

ಳೆಲ್ಲ ಸಣ್ಣ ಆಕಾರದಲ್ಲಿರುತ್ತವೆ. ರೋಗಿಯ ದೇಹದಲ್ಲಿ ಇವು ಹಗಲಿನಲ್ಲಿ ಒಳಭಾಗದ ರಕ್ತವಾಹಿನಿಗಳಲ್ಲಿದ್ದರೆ, ರಾತ್ರಿಯಲ್ಲಿ ದೇಹದ ಮೇಲ್ಭಾಗದಲ್ಲಿ ಹರಿಯುವ ರಕ್ತ ವಾಹಿನಿಗಳಲ್ಲಿ ಹೆಚ್ಚಾಗಿರುತ್ತವೆ. ಈ ಹಗಲು ಮತ್ತು ರಾತ್ರಿಯ ಕಾಲಬದ್ಧ ಕ್ರಮವನ್ನು ಅನೇಕ ವಿಜ್ಞಾನಿಗಳು ವಿವರಿಸಿದ್ದಾರೆ. ಮ್ಯಾನ್ಸನ (Manson) ೧೮೮೭ರಲ್ಲಿ ವಿವರಿಸಿದಂತೆ ಮೈಕ್ರೊಫೈಲೇರಿಯಾಗಳು ರಾತ್ರಿ ೧೦ ಮತ್ತು ರಾತ್ರಿ ೨ ರ ನಡುವೆ ಮೇಲ್ಭಾಗದ ರಕ್ತನಾಳಗಳಲ್ಲಿಯೂ ಹಾಗೂ ಉಳಿದ ಹೊತ್ತಿನಲ್ಲಿ ಹೃದಯ, ಪಿತ್ತ ಜನಕಾಂಗ ಮತ್ತು ಪುಪ್ಪುಸದ ರಕ್ತನಾಳಗಳಲ್ಲಿರುತ್ತವೆ. ಮುಂದಿನ ಬೆಳವಣಿಗೆಯು ಕ್ಯೂಲೆಕ್ಸ್ ಜಾತಿಯ ಸೊಳ್ಳೆಯ ದೇಹದಲ್ಲಿ ನಡೆಯುತ್ತದೆ. ಕ್ಯೂಲೆಕ್ಸ್ ಜಾತಿಯ ಸೊಳ್ಳೆಯು ರೋಗಿಯನ್ನು ಕಚ್ಚಿ ರಕ್ತ ಹೀರಿದಾಗ ಮೈಕ್ರೊಫೈಲೇರಿಯಾಗಳು ಸೊಳ್ಳೆಯ ಅನ್ನನಾಳವನ್ನು ಪ್ರವೇಶಿಸುತ್ತವೆ. ಇವು ಕ್ರಮೇಣ ಜೀರ್ಣನಾಳದ ಗೋಡೆಯನ್ನು ಕೊರೆದು ಅದರ ಎದೆಯ ಮಾಂಸಖಂಡಗಳಲ್ಲಿ ನೆಲೆಸುವವು. ಅಲ್ಲಿಂದ ಅವು ಸೊಳ್ಳೆಯ ಬಾಯಿಯಲ್ಲಿ ತಂಗುತ್ತವೆ. ಈ ಸೊಳ್ಳೆಯು ರಾತ್ರಿಯಾದೊಡನೆ ಆರೋಗ್ಯವಂತ ಮನುಷ್ಯನನ್ನು ಕಚ್ಚಿದಾಗ, ಅವನ ರಕ್ತದಲ್ಲಿ ಈ ಮರಿಗಳು ಬಿಡುಗಡೆಯಾಗುತ್ತವೆ. ಹೀಗೆ ಕ್ಯೂಲೆಕ್ಸ್ ಸೊಳ್ಳೆಯೂ ರೋಗವಾಹಕವಾಗಿರುತ್ತದೆ. ಮೈಕ್ರೊಫೈಲೇರಿಯಾಗಳು ಎರಡು ಸಾರಿ ದೇಹ ಮಾರ್ಪಾಡು ಹೊಂದಿ ಪ್ರೌಢಜೀವಿಗಳಾಗಿ ಬಾಳುವವು.












ದೇಹದ ಬೇರೆ ಬೇರೆ ಭಾಗಗಳಿಗೆ

ಮೊದಲು ಇವು ಫೈಲೇರಿಯಾ ಜ್ವರ, ಮಾನಸಿಕ ಅಧೋಗತಿ, ತಲೆಶೂಲೆ ಮುಂತಾದ ಲಕ್ಷಣಗಳನ್ನು ತೋರಿಸುವವು. ಮೈಕ್ರೊಫೈಲೇರಿಯಾಗಳ ಸಂಖ್ಯೆ ಹೆಚ್ಚಾಗಿ ರಸವಾಹಿನಿ ನಾಳಗಳಲ್ಲಿ ತುಂಬಿ ರಸವಾಹಿನಿ ಮಂಡಲ (Lymphatic System) ನಿಷ್ಕ್ರಿಯ ಗೊಂಡಾಗ, ಅವು ಇರುವ ಭಾಗಗಳು ಬಾತು ಎಲೆಫೆಂಟ್ಯಾಸಿಸ್ ಅಥವಾ ಫೈಲೇರಿಯಸಿಸ್ ಅಂದರೆ ಆನೆಕಾಲಿನ ರೋಗವಾಗಿ ಪರಿಣಮಿಸುವುದು. ಈಗ ಲಿಂಫ(ರಸ) ಮತ್ತು ರಕ್ತ ಪರಿಚಲಹನಾಂಗಗಳಲ್ಲಿಯ ಸಂಯೋಜನೆ ತಪ್ಪಿ, ಫೈಲೇರಿಯಸಾಗಳಿರುವ ಭಾಗ ಕಲ್ಪನೆಗೆ ಮೀರಿ ಬಾತು, ಕಾಲಿದ್ದರೆ- ಆನೆಕಾಲಾಗಿ ಅಥವಾ ಬೀಜಾಶಯುಗಳಿದ್ದರೆ ೧೫-೨೦ ಪಟ್ಟು ದೊಡ್ಡದಾಗಿ ಕಾಣುವವು. ಸಾಮಾನ್ಯವಾಗಿ ಇದು, ಕೈಕಾಲು, ಬೀಜಾಶಯು, ಸ್ತನ ಅಥವಾ ಹೆಣ್ಣುಮಕ್ಕಳ ಜನನೇಂದ್ರಿಯುಗಳಿಗೆ ಸೋಂಕಿದ್ದು ಕಂಡು ಬರುತ್ತದೆ. ಇದರಿಂದ ರೋಗಿಗೆ ಹೆಚ್ಚಿನ ತೊಂದರೆಗಳೇನು ಆಗಲಾರವು. ಆದರೆ ರೋಗಿಯು ಮನೊಸ್ಥೈರ್ಯ ಕುಂದಿ, ಸಾಮಾ ಿಕ ಸಂಬಂಧಗಳಿಂದ ಅವನ ಮೇಲಾಗುವ ಪರಿಣಾಮ ದೈಹಿಕ ತೊಂದರೆಗಿಂತ ಎಷ್ಟೊ ಪಟ್ಟು ಹೆಚ್ಚಾಗಿರುತ್ತದೆ. ಈ ರೋಗಕ್ಕೆ ಇದುವರೆಗೆ ಸಮಾಧಾನಕರ ಉಪಚಾರ ಕಂಡುಬಂದಿಲ್ಲ. ಆದರೂ ರೋಗಿಯುನ್ನು ಹೆಟ್ರಾಝೊನ (Hetrazon), ಅಂಟಿಮೋನಿ (Antimoni) ಹಾಗೂ ಆರ್ಸೆನಿಕ (arsenic) ಮಿಶ್ರಣಗಳಿಂದ ಉಪಚರಿಸಿದರೆ ತಕ್ಕಮಟ್ಟಿಗೆ ಯುಶಸ್ಸು ಸಿಗಬಹುದು. ಎಲ್ಲಕ್ಕೂ ಮಿಗಿಲಾಗಿ ಸೊಳ್ಳೆಗಳ ಕಡಿತದಿಂದ ರಕ್ಷಿಸಿಕೊಂಡಲ್ಲಿ ಈ ರೋಗವಲ್ಲದೆ,

ಮಲೇರಿಯಾ ಮುಂತಾದ ರೋಗಗಳಿಂದಲೂ ತಪ್ಪಿಸಿ ಕೊಂಡಂತಾಗುತ್ತದೆ.

ಇದಲ್ಲದೆ ಮತ್ತೊಂದು ಫೈಲೇರಿಯಾ ಹುಳು ಕಣ್ಣಿನ ಹುಳು (Eye worm) ಆಫ್ರಿಕಾ ಖಂಡದಲ್ಲಿ ಕಣ್ಣಿನ ರೋಗಕ್ಕೆ ಕಾರಣವಾಗಿರುತ್ತದೆ. ಈ ಫೈಲೇರಿಯಾ ಹುಳುವಿನ ಶಾಸ್ತ್ರೀಯ ಹೆಸರು ಲೋಆ ಲೋಆ (Loa Loa) ಎಂದು ಇರುತ್ತದೆ. ಅವು ಚರ್ಮದ ಕೆಳಭಾಗದ ಕೋಶಜಾಲಿನ ಮೇಲೆ ಆಕ್ರಮಣ ಎಸಗುತ್ತವೆ. ಅವುಗಳ ವಲಸೆ ಕ್ರಮದಲ್ಲಿ ಕಣ್ಣು ಗುಡ್ಡಿಯೊಳಗಿಂದ ಹಾದು ಹೋಗುವುದರಿಂದ ಸಾಮಾನ್ಯವಾಗಿ ಜನರಿಗೆ ಇದು ಕಣ್ಣು ಹುಳು ಎಂದು ಪರಿಚಿತವಿದೆ. ಗಂಡು ಮತ್ತು ಹೆಣ್ಣು ಹುಳುಗಳು ಅನುಕ್ರಮವಾಗಿ ೨೦–೩೫mm ಹಾಗೂ ೨೦–೭೦mm ಉದ್ದವಾಗಿರುತ್ತವೆ. ಹೆಣ್ಣಿನ ಗರ್ಭಾಶಯದಲ್ಲಿ ಮೈಕ್ರೊಫೈಲೇರಿಯಾಗಳು ಬೆಳೆದು ಹಗಲಿನಲ್ಲಿ ಹೊರಭಾಗದ ರಕ್ತನಾಳಗಳಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ರಾತ್ರಿ ಮಾತ್ರ ಕಾಣಿಸಿಕೊಳ್ಳುವದಿಲ್ಲ. ಇವುಗಳ ಮಧ್ಯವರ್ತಿ ಆಶ್ರಯ ಜೀವಿ ಮಾವಿನನೊಣ(mango flies)ಗಳಾಗಿರುತ್ತವೆ. ಇದು ನೊಣದಲ್ಲಿ ಬೆಳೆದು ದೇಹ ಮಾರ್ಪಾಡು ಹೊಂದಿ ಮತ್ತೊಬ್ಬ ಆರೋಗ್ಯವಂತ ಮನುಷ್ಯನನ್ನು ಕಚ್ಚಿದಾಗ ಅವನ ದೇಹದಲ್ಲಿ ಮುಂದಿನ ಹಂತಕ್ಕೆ ಬೆಳೆಯುವುದು.

ಲೋಆ ಮೈಕ್ರೊ ಫೈಲೇರಿಯಾಗಳು ರೋಗಿಯ ಮಿದುಳು ಮತ್ತು ನರಗಳಲ್ಲಿ ಸೇರಿದಾಗ ಸಾವನ್ನು ತರುವವು. ತಮ್ಮೊಂದಿಗೆ ರೋಗ ತರಬಲ್ಲ ವೈರಸ್‌ಗಳನ್ನು ಸಹ ಒಯ್ಯು-

ವವು. ಅವು ಕಣ್ಣಿನಲ್ಲಿದ್ದಾಗ ವಿಪರೀತ ಕೆರಚುವಿಕೆ ಆಗಿ ಕಣ್ಣು ಬಾಯುವುದು. ಆದ್ದರಿಂದ ಸೊಳ್ಳೆಗಳ ಕಾಟ ಗ್ರಾಮೀಣ ಭಾಗದವರಿಗೆ ಮಾತ್ರ ಸೀಮಿತವಾಗಿರದೇ ಪಟ್ಟಣಗಳ ಕೊಳಚೆ ಪ್ರದೇಶಗಳಲ್ಲಿ ಅಲ್ಲಲ್ಲಿ ಬೆಳೆದಿರುವುದರಿಂದ ಆ ಭಾಗದ ಜನರು ಅವುಗಳ ಕಾಟಕ್ಕೆ ಈಡಾಗುತ್ತಾರೆ. ಇದರಿಂದ, ಇವುಗಳಿಂದ ಹರಡುವ ರೋಗಗಳನ್ನು ತಡೆಯಬೇಕಾದರೆ ಸೊಳ್ಳೆಗಳ ಸಂತತಿಯನ್ನು ಬೆಳವಣಿಗೆಯ ಎಲ್ಲ ಹಂತಗಳಲ್ಲಿ ನಾಶಮಾಡ-ಬೇಕಾಗುತ್ತದೆ.

## ೬. ನಾರು ಹುಣ್ಣು (Guinea worm)

ನಾರು ಹುಣ್ಣಿನ ಬಾಧೆಯು ಗಿನಿ ವರ್ಮ್ (Guinea worm) ಎಂಬ ಜಂತಿನಿಂದ ಆಗುತ್ತದೆ. ಮನುಷ್ಯನಲ್ಲಿ ಪರ-ತಂತ್ರ ಜೀವಿಗಳಾಗಿ ಬಾಳುವ ಈ ಜಂತುಗಳು ಕೇವಲ ಹೆಣ್ಣು ಮಾತ್ರ. ಇವು ಸಾಮಾನ್ಯವಾಗಿ ೨' ರಿಂದ ೩' ಉದ್ದವಾಗಿರುತ್ತವೆ. ಹೀಗೆ ಉದ್ದವಾಗಿರುವ ನಾರು ಹುಳುವಿಗೆ ಆಂಗ್ಲ ಭಾಷೆಯಲ್ಲಿ ಸರ್ಪೆಂಟ ವರ್ಮ್ (Serpent worm) ಅಂದರೆ ಹಾವಿನಂತಿರುವ ಹುಳು ಎಂದು ಸಂಬೋಧಿಸಿದ್ದು ಸೂಕ್ತ. ಇಂಥ ದುಷ್ಟ ನಾರು ಹುಳುವು ಹಿಂದೆ ಇಸ್ರೇಲಿಗಳ ನಾಮಶೇಷ ಕೂಡಾ ಉಳಿಸ-ದಿರಲು ಅಣಿಯಾಗಿತ್ತು. ಇವು ಆಫ್ರಿಕೆ, ಅರಬಸ್ತಾನ, ತುರ್ಕ-ಸ್ತಾನ, ಚೀನಾ, ಉತ್ತರ ಅಮೇರಿಕಾ ಖಂಡಗಳ ಒಣ ಪ್ರದೇಶ ಗಳಲ್ಲಿ ವ್ಯಾಪಕವಾಗಿ ಹರಡಿರುತ್ತವೆ.

ಇವು ಎಲ್ಲ ದುಂಡು ಹುಳುಗಳಲ್ಲಿ ಉದ್ದವಾಗಿರುವವು. ಪ್ರೌಢಹುಳುಗಳು ಸಿಲಿಂಡರ ಆಕಾರದಲ್ಲಿರುವವು. ಗಂಡು ಜಂತು

ಗಳು ಸಂಖ್ಯೆಯಲ್ಲಿ ಹೆಣ್ಣಿಗಿಂತ ಕಡಿಮೆ ಹಾಗು ಉದ್ದದಲ್ಲಿ ೧೨-೪೦mm ಹಾಗೂ ಅಗಲದಲ್ಲಿ ೦.೪mm ವ್ಯಾಸವುಳ್ಳವು ಇದ್ದರೆ ಹೆಣ್ಣು ಹುಳುವು ೭೦-೧೨೦mm ಉದ್ದ ಹಾಗು ೦.೯ ಮತ್ತು ೧.೭mm. ವ್ಯಾಸವುಳ್ಳದ್ದಾಗಿರುತ್ತವೆ. ಪ್ರೌಢ ಜಂತುಗಳು ಚರ್ಮದ ಕೆಳಪದರಿನಲ್ಲಿದ್ದಾಗ ಲೋಮನಾಳಗಳ ಬಲೆ ಕಂಡಂತೆ (Capillary network) ಗೋಚರವಾಗುತ್ತವೆ. ಇವುಗಳ ಮುಂಭಾಗದಲ್ಲಿ ಒಂದು ಕ್ಯೂಟಿಕಲ್‌ಯುಕ್ತ ಉಂಗುರ ಇದೆ. ಇದರ ಮಧ್ಯದಲ್ಲಿ ಬಾಯಿರಂಧ್ರವಿದೆ. ಬಾಯಿ ಸುತ್ತಲು ಒಳ ಹಾಗು ಹೊರ ಪಂಕ್ತಿಗಳಿದ್ದು ಅವುಗಳಲ್ಲಿ ಅನುಕ್ರಮವಾಗಿ ೬ ಮತ್ತು ೪ ಲೇಜಿಯುಲ ಪ್ಯಾಪಿಲ್ಲಿಗಳಿರುತ್ತವೆ. ಗಂಡಿನ ಹಿಂಭಾಗವು ವಕ್ರವಾಗಿದ್ದರೆ ಹೆಣ್ಣಿನ ಹಿಂಭಾಗವು ಸರಳ ಹಾಗು ಚೂಪಾಗಿರುತ್ತದೆ. ಬಾಯಿಯ ಹಿಂದೆ ಯಾಸೊಫೇಗಸ್ ಇದ್ದು ಅದನ್ನು ಸ್ಪಷ್ಟವಾದ ಮುಂಭಾಗದ ಸ್ನಾಯು ಪುಷ್ಟಿತಭಾಗ ವೆಂದು ಹಾಗು ಹಿಂಭಾಗದ ಗ್ರಂಥಿಯುಕ್ತ ಭಾಗವೆಂದು ಗುರು ತಿಸಲ್ಪಡುತ್ತದೆ.

ಇವು ತತ್ತಿಗಳನ್ನಿಡದೆ. ನಿಶೇಚನೆ ಗರ್ಭಾಶಯದಲ್ಲಿ ನಡೆಯುತ್ತದೆ. ಸಂಯುಕ್ತ ಜೀವಾಣುಗಳ (Zygote) ಸಂಖ್ಯೆ ಹೆಚ್ಚಿದಂತೆ ಹೆಣ್ಣಿನಲ್ಲಿಯ ಅನ್ನನಾಳ ಮತ್ತು ಬೇರೆ ಭಾಗಗಳು ವಿಕೃತಗೊಂಡು ತತ್ತಿಗಳನ್ನು ಹೊತ್ತ ಗರ್ಭಾಶಯ ಬೆಳೆಯಲು ಆಸ್ಪದವಾಗುವುದು. ಗರ್ಭಧರಿಸಿದ ಹೆಣ್ಣು ಹುಳುವು ಅಂಗಾಂಗಗಳನ್ನು ಕೊರೆದು, ಹತ್ತು ಹನ್ನೆರಡು ತಿಂಗಳುಗಳಲ್ಲಿ ಚರ್ಮದ ಕೆಳಗೆ ಬಂದು ನೆಲೆಸುತ್ತದೆ. ಇದು ಸಾಧಾರಣವಾಗಿ

ಮೊಳಕಾಲಿನ ಕೆಳಗೆ, ಹಿಮ್ಮಡಿಯ ಅಕ್ಕ ಪಕ್ಕಗಳಲ್ಲಿ ಕಾಣಿಸಿ ಕೊಳ್ಳುವುದು. ಇದು, ಈ ವಿಶಿಷ್ಟವಾದ ಸ್ಥಳವನ್ನು ಆಯ್ದು ಕೊಳ್ಳಲಿಕ್ಕೆ ಕಾರಣವೆಂದರೆ, ಇಂಥ ಭಾಗಗಳು ಮೇಲಿಂದಮೇಲೆ ನೀರಿನೊಡನೆ ಸಂಪರ್ಕ ಬರುವುದರಿಂದ ಇದು ತನ್ನ ಮರಿ ಗಳನ್ನು (ಲಾರವಾಗಳನ್ನು) ನೀರಿನಲ್ಲಿ ಬಿಟ್ಟು ಮುಂದಿನ ಜೀವನ ಚಕ್ರ ಪೂರ್ತಿಗೊಳಿಸಲು ಸಾಧ್ಯವಾಗುತ್ತದೆ.

ಕೆಲವು ಸಂದರ್ಭಗಳಲ್ಲಿ ಇವು ತೊಡೆ, ಹೊಟ್ಟೆ, ಎದೆ, ಬೆನ್ನು, ನಾಲಿಗೆ ಮುಂತಾದ ಭಾಗಗಳಲ್ಲಿಯೂ ಕಾಣಿಸಿಕೊಳ್ಳು ವವು. ಹೆಣ್ಣುಹುಳು ಚರ್ಮದ ಕೆಳಭಾಗ ಸೇರಿದಮೇಲೆ ಅದು ಇರುವ ಸ್ಥಳದಲ್ಲಿ ಸುಮಾರು ಒಂದು ರೂಪಾಯಿ ಅಗಲದ ಬೊಬ್ಬೆ (Blister) ಏಳುತ್ತದೆ. ಈಗ ರೋಗಿಗೆ ಜ್ವರ ಬರ ಲಾರಂಭಿಸಿ ಮೈಮೇಲೆ ಬರೆ ಬರುವವು. ಇದು ಇಷ್ಟಕ್ಕೆ ನಿಲ್ಲದೆ ಅವನಿಗೆ ವಾಂತಿ ಆಗಲಾರಂಭಿಸಿ ಉಸಿರಾಟವು ಕೂಡಾ ಕಷ್ಟ ವಾಗುತ್ತದೆ. ಒಂದೆರಡು ದಿನಗಳಲ್ಲಿ ಈ ಬೊಬ್ಬೆ ಒಡೆದು ಹುಣ್ಣಾಗುತ್ತದೆ. ಇದು ನೀರಿನೊಡನೆ ಸಂಪರ್ಕ ಬಂದೊಡನೆ ಹುಣ್ಣಿನ ಮಧ್ಯ ಸಾಸಿವೆ ಕಾಳಿನಷ್ಟು ರಂಧ್ರವು ಕಾಣಿಸಿ ಕೊಳ್ಳುತ್ತದೆ. ಈಗ ಈ ರಂಧ್ರದ ಮೂಲಕ ಹೆಣ್ಣುಹುಳು ವಿನ ಗರ್ಭಾಶಯವು ಹೊರ ಬೀಳಲಾರಂಭಿಸಿ ಮೊದಲು ನೀರಿನಂತಿರುವ ಒಂದೆರಡು ತೊಟ್ಟು ದ್ರವವು ಜಿನಗುತ್ತದೆ. ಮೊದಲು ದ್ರವವು ಬಣ್ಣರಹಿತ, ಕ್ಷಣ ಮಾತ್ರದಲ್ಲಿ ಹಾಲಿನಂತೆ ಬೆಳ್ಳಗಾಗುವುದು. ಇಂಥ ರೋಗಿ ನೀರು ತರಲು ಇಳಿಯುವ ಭಾವಿಯಲ್ಲಿ ಕೈಕಾಲುಗಳನ್ನು ನೀರಿನಲ್ಲಿ ಮುಳುಗಿಸಿ ಕೊಡ ತುಂಬುವಷ್ಟರಲ್ಲಿ ಹೆಣ್ಣುಜಂತು, ಎಲ್ಲ ಲಾರವಾಗಳನ್ನು ನೀರಿ–

ನಲ್ಲಿ ಬಿಟ್ಟು ಸಾಯುವುದುಂಟು. ಈ ಹಂತದಲ್ಲಿಯೇ ಹಳ್ಳಿಯಲ್ಲಿ ವೈದ್ಯರೆನಿಸಿಕೊಂಡವರು ಹೆಣ್ಣಿನ ಭಾಗವು ಹೊರ ಬಂದಾಗ ಕಟ್ಟಿಗೆಗೆ ಸುತ್ತಿ ಜಾಗರೂಕತೆಯಿಂದ ಎಳೆದು ಹೊರ ತೆಗೆಯುವುದುಂಟು. ಒಂದು ವೇಳೆ ಅದು ಅರ್ಧಕ್ಕೆ ಕಡಿದು ಹೋದರೆ, ಅದು ಚರ್ಮದ ಬುಡಭಾಗದಲ್ಲಿ ಸತ್ತು ಹಲವಾರು ತೊಡಕುಗಳನ್ನು ರೋಗಿಗೆ ತರಬಲ್ಲದು.

ಗರ್ಭಾಶಯದಿಂದ ನೀರಿನಲ್ಲಿ ಬಂದ ಲಾರವಾಗಳು

ಹೆಣ್ಣು ನಾರುಹುಳುವಿನ ಗರ್ಭಾಶಯ
ಕಾಲಿನಿಂದ ಹೊರಬೀಳುತ್ತಿರುವದು





(ಮರಿಗಳು) ಕೇವಲ ೪೮ ತಾಸುಗಳವರೆಗೆ ಜೀವಿಸಬಲ್ಲವು. ಈ ಅವಧಿಯಲ್ಲಿ ಅವು ಸೈಕ್ಲೊಪ್ಸ ಎಂಬ (Cyclops) ಸಿಹಿ ನೀರಿನಲ್ಲಿ ವಾಸಿಸುವ ಕಠಿಣ ಚರ್ಮಿಯನ್ನು ಸಂಧಿಸಿ ಜೀವನ ಚಕ್ರ ಮುಂದುವರೆಸಬೇಕಾಗುತ್ತದೆ. ಈ ಕಠಿಣ ಚರ್ಮಿ ಸೈಕ್ಲೊಪ್ಸವು ಮಧ್ಯಪೋಷಕ ಜೀವಿಯಾಗಿದೆ. ಇದು ಮರಿಗಳನ್ನು ತಿನ್ನುತ್ತದೆ. ಮರಿಗಳು ಅದರ ಅನ್ನನಾಳದಲ್ಲಿ ಪಚನವಾಗದೆ ೨–೩ ವಾರಗಳಲ್ಲಿ ೨ ಸಲ ದೇಹ ಮಾರ್ಪಾಡು ಹೊಂದಿ ಅವು ಸೋಂಕುವ ಹಂತಕ್ಕೆ ಬರುತ್ತವೆ. ಈ ಸೈಕ್ಲೊಪ್ಸಗಳಿರುವ ನೀರನ್ನು ಮನುಷ್ಯ ಕುಡಿದರೆ ನಾರು ಹುಣ್ಣಿನ ಸೋಂಕು ತಗಲುವುದು. ಈ ಸೈಕ್ಲೊಪ್ಸಗಳು ಜಠರ ರಸದ ಪ್ರಭಾವದಿಂದ ಮನುಷ್ಯನ ಜಠರದಲ್ಲಿ ಸಾಯುವವು. ಆದರೆ ನಾರು ಹುಳುವಿನ ಮರಿಗಳು ಸೈಕ್ಲೊಪ್ಸದ ದೇಹದಿಂದ ಬಿಡುಗಡೆಯಾಗಿ, ಜಠರದ ಮಾಂಸ ಖಂಡಗಳನ್ನು ಭೇದಿಸಿ ದೇಹದ ಅಂಗಾಂಗಗಳಿಗೆಲ್ಲ ಹರಡುತ್ತವೆ. ಈ ಸ್ಥಳಗಳಲ್ಲಿ ಗಂಡು ಹೆಣ್ಣುಗಳು ಜೊತೆಗೂಡುವವು. ಇದಾದ ನಂತರ ಗಂಡಿನ ಗತಿ ಏನೆಂಬುದು ತಿಳಿದು ಬಂದಿಲ್ಲ. ಈ ರೀತಿಯಾಗಿ ನಾರು ಹುಳುವಿನ ಜೀವನ ಚಕ್ರ ಪೂರ್ತಿಗೊಳ್ಳುತ್ತದೆ.

ಈ ರೋಗದಿಂದ, ಹುಣ್ಣು ಆದ ಭಾಗದಲ್ಲಾಗುವ ವಿಪರೀತ ನೋವಲ್ಲದೆ, ದಮ್ಮು, ತುರುಸುವಿಕೆ, ತಲೆಶೂಲೆ, ವಾಂತಿ, ಭೇದಿ ಮುಂತಾದ ಕಾಯಿಲೆಗಳು ಬರುತ್ತವೆ. ಈ ಕಾಯಿಲೆಗಳಿಗೆ ಕಾರಣವೆಂದರೆ ರೋಗಿಯ ದೇಹದಲ್ಲಿ ಇವು ಬಿಡುವ ಅಪಾಯಕಾರಿ ದ್ರವಗಳು, ಈ ದ್ರವಗಳು. ಕ್ರಮೇಣ

ರೋಗಿಯ ದೇಹಗತವಾದಾಗ ಕಾಯಿಲೆಯ ಲಕ್ಷಣಗಳು ಕಂಡು ಬರಲು ಪ್ರಾರಂಭಿಸುವವು. ಈ ಭಯಂಕರವಾದ ರೋಗ ಜಂತುಗಳನ್ನು ನಾಶಪಡಿಸಿ, ಇವು ತರುವ ವಿವಿಧ ಕಾಯಿಲೆಗಳಿಂದ ಮುಕ್ತಿ ಪಡೆಯಲು ಮನುಷ್ಯನು ಪ್ರಯತ್ನಿಸುತ್ತಿದ್ದಾನೆ. ಆದರೆ ಯಶಸ್ಸು ಸಾಕಷ್ಟು ಸಿಕ್ಕಿಲ್ಲ. ಅದಕ್ಕೆ ಹಳ್ಳಿಯಲ್ಲಿರುವ ನಮ್ಮ ಬಾಂಧವರಲ್ಲಿರುವ ಅಜ್ಞಾನವೇ ಕಾರಣವಾಗಿದೆ. ನಾರು ಹುಣ್ಣಿನ ಸೋಂಕನ್ನು ಪ್ರಭಾವಿಯಾಗಿ ತಡೆಯಲು ಕೆಳಗಿನ ಕ್ರಮ ಕೈಕೊಳ್ಳುವುದು ಅವಶ್ಯ.

೧) ಎಲ್ಲ ಹಳ್ಳಿ ಹಾಗು ಪಟ್ಟಣಗಳಲ್ಲಿರುವ ಇಳಿಯುವ ಭಾವಿಗಳನ್ನು ಚಕ್ರದ ಸಹಾಯದಿಂದ ನೀರು ಜಗ್ಗುವ ಭಾವಿಯಾಗಿ ಪರಿವರ್ತಿಸಬೇಕು. ಇದರಿಂದ ರೋಗಿಯಲ್ಲಿಯ ಹೆಣ್ಣು ತನ್ನ ಗರ್ಭಾಶಯದಲ್ಲಿರುವ ಮರಿಗಳನ್ನು ನೀರಿಗೆ ಬಿಡಲು ಬಾರದೆ, ಜೀವನ ಚಕ್ರ ಪೂರ್ಣಗೊಳಿಸುವ ಬದಲು ಅದರ ಅಂತ್ಯವಾಗುವುದು.

೨) ಹೀಗೆ ಭಾವಿಗಳನ್ನು ಪರಿವರ್ತಿಸಿದ ಮೇಲೆ ಅಲ್ಲಿನ ನೀರಿನಲ್ಲಿರುವ ಮಧ್ಯಪೋಷಕ ಜೀವಿಗಳನ್ನು ಕೊಲ್ಲಲು ಬ್ಲೀಚಿಂಗ ಪೌಡರ ಅಥವಾ ಸುಣ್ಣ ಅಥವಾ ಪರಕ್ಲೋರಾನ— ಈ ಮೂರು ರಾಸಾಯನಿಕ ಪದಾರ್ಥಗಳಲ್ಲಿ ಯಾವದಾದರೊಂದನ್ನು ನೀರಿಗೆ ಸೇರಿಸಬೇಕು. ಸೈಕ್ಲೋಪ್ಸಗಳು ಸಾಯುವುದರಿಂದ ನಾರು ಹುಳುಗಳು ಮರಿಗಳಿಗೆ ಮಧ್ಯ ಪೋಷಕ ಜೀವಿ ಸಿಗದೆ ಜೀವನ ಚಕ್ರ ಪೂರ್ಣಗೊಳ್ಳದೆ ಅವುಗಳ ವಂಶದ ಅಂತ್ಯವಾದಂತೆಯೇ ಸರಿ.

೩) ಇತ್ತೀಚೇಗೆ ಸೊಳ್ಳೆಗಳ ಮರಿಗಳ ವಿನಾಶಕ್ಕೆ ರಾಮ ಬಾಣವಾಗಿ ಪರಿಣಮಿಸಿದ ಗ್ಯಾಂಬುಸಿಯಾ (Gambusia) ಮೀನಿನಂತೆ ಸೈಕ್ಲೊಪ್ಸಗಳನ್ನು ಬೇಟೆಯಾಡಿ ತಿನ್ನುವ ಮೀನು-ಗಳು ಸಂಶೋಧಕರ ಲಕ್ಷಕ್ಕೆ ಬಂದಿದೆ. ಇಂಥ ಮೀನುಗಳನ್ನು ಆರೋಗ್ಯಾಧಿಕಾರಿಗಳು ಹಳ್ಳಿಗಳಲ್ಲಿರುವ ಪರಿವರ್ತಿತ ಇಳಿ-ಯುವ ಭಾವಿಗೆ ಬಿಡಬೇಕು.

೪) ರೋಗಿಯನ್ನು ಫೆನೊಥಿಯಾಝೈನ (Pheno-thiazine) ಎಂಬ ಕೀಟನಾಶಕ ಪುಡಿಯನ್ನು ಆಲಿವ ಎಣ್ಣೆ (Olive oil)ಯೊಡನೆ ಮಿಶ್ರಮಾಡಿ ಒಂದು ವಾರದವರೆಗೆ ಇಂಜಿಕ್ಷನ ಕೊಟ್ಟರೆ ಪ್ರೌಢಜೀವಿಗಳು ಚರ್ಮದಡಿಯಲ್ಲಿ ಸತ್ತು ಬೀಳುವವು.

೫) ಇಷ್ಟೆಲ್ಲ ಪರಿಣಾಮಕಾರಿ ಉಪಾಯಗಳನ್ನು ಬಳಸಿ ದರೂ, ಈ ರೋಗದ ವ್ಯಾಪಕತೆ ಕೆಲವು ಹಳ್ಳಿಗಳಲ್ಲಿ ಕಡಿಮೆ ಆಗಿಲ್ಲ. ಎಂದ ಮೇಲೆ ಸರ್ಕಾರದವರು, ಸಾಮಾಜಿಕ ಸಂಘ ಸಂಸ್ಥೆಗಳು ಹಳ್ಳಿಯ ಜನರಲ್ಲಿ ಆರೋಗ್ಯದ ಬಗ್ಗೆ, ರೋಗ ರುಜಿನಗಳ ಹಾಗೂ ಅವುಗಳ ನಿಯಂತ್ರಣದ ಬಗ್ಗೆ ವಿಶೇಷಉಪ-ನ್ಯಾಸಗಳನ್ನಿತ್ತು ಪ್ರಚಾರ ಕೈಕೊಳ್ಳಬೇಕು.

## ೭. ಮನುಷ್ಯನ ಕರುಳಿನಲ್ಲಿ ಕೊಕ್ಕೆಹುಳು

(Hook worms infection)

ಕೊಕ್ಕೆ ಹುಳುವು ಮನುಷ್ಯನ ಕರುಳಿನಲ್ಲಿ ಪರತಂತ್ರ ಜೀವಿಯಾಗಿ ಬಾಳುತ್ತದೆ. ಇದು ಬಹುತೇಕ ಪಶ್ಚಿಮಯುರೋಪ್ಪ

ದೇಶಗಳಲ್ಲಿ, ಏಶಿಯಖಂಡದ ಉಷ್ಣ ಮತ್ತು ಸಮಶೀತೋಷ್ಣ ಪ್ರದೇಶದ ದೇಶಗಳಲ್ಲಿ, ಆಫ್ರಿಕಾ ಖಂಡದ ದೇಶಗಳಲ್ಲಿ, ಪ್ಯಾಸಿಫಿಕ್ ಸಮುದ್ರದ ತೀರದ ಅನೇಕ ದೇಶಗಳಲ್ಲಿ ಹಾಗು ದಕ್ಷಿಣ ಅಮೇರಿಕೆಯ ಅನೇಕ ದೇಶಗಳ ಜನಗಳಲ್ಲಿ ಪರತಂತ್ರ ಜೀವಿಗಳಾಗಿ ಹೇರಳವಾಗಿ ಸಿಗುತ್ತದೆ.

ಇವು ೮-೧೩mm ಉದ್ದವಾಗಿರುತ್ತವೆ. ಬೇರೆ ದುಂಡು ಹುಳುಗಳಂತೆ ಹೆಣ್ಣು ಹುಳು ಗಂಡುಹುಳುವಿನಗಿಂತ ಸುಮಾರು ೨-೩mm ಉದ್ದವಾಗಿರುತ್ತದೆ. ಇವು ಪೂರ್ಣ ಬಿಳಿಯಾಗಿ ಅಥವಾ ಹಸ್ತಿದಂತದ ಬಣ್ಣ ಕೊಂಡಿರುತ್ತವೆ. ಇವುಗಳಲ್ಲಿ ಸಂತಾನೋತ್ಪತ್ತಿ ಮನುಷ್ಯನ ಕರುಳಿನಲ್ಲಿದ್ದಾಗಲೇ ನಡೆಯುತ್ತದೆ. ವೀರ್ಯಾಣುಗಳಿಂದ ನಿಶೇಚನಗೊಂಡ ತತ್ತಿಗಳು ರೋಗಿಯ ಮಲದೊಂದಿಗೆ ಹೊರ ಬಿದ್ದು ಮಣ್ಣಿನೊಂದಿಗೆ ಬೆರೆತುಕೊಳ್ಳುವವು. ಅವುಗಳಿಗೆ ಸಾಕಷ್ಟು ತೇವು ಸಿಕ್ಕಲ್ಲಿ ಮುಂದಿನ ಹಂತಕ್ಕೆ ಬೆಳವಣಿಗೆ ಹೊಂದಿ, ಮರಿಗಳ ರೂಪದಲ್ಲಿ ಹೊರಬೀಳುವವು.

ಹಳ್ಳಿಗಲ್ಲಿ ಜನರು ಬರಿಗಾಲಿನಿಂದ ನಡೆಯುವದನ್ನು ನಾವು ಕಾಣುತ್ತೇವೆ. ಅವರ ಕಾಲಿನ ಬೆರಳಿನ ಸಾಂದಿನಲ್ಲಿಯ ಮಿದುವಾದ ಚರ್ಮದ ಮೂಲಕ ಇವುಗಳ ಮರಿಗಳು ಅವನ ದೇಹ ಸೇರುತ್ತವೆ. ಇದಲ್ಲದೆ ಆಹಾರ ಮತ್ತು ನೀರು ಇವುಗಳ ಮರಿಗಳಿರುವ ಮಣ್ಣಿನೊಂದಿಗೆ ಕೂಡಿಕೊಂಡಾಗ ಅಂತಹ ಆಹಾರ ಹಾಗೂ ನೀರು ಸೇವಿಸಿದಾಗ ಈ ಮರಿಗಳು ಮನುಷ್ಯನ

ಕರುಳು ಸೇರುವ ಸಾಧ್ಯತೆ ಹೆಚ್ಚು. ಇಲ್ಲಿಂದ ಇವು ಅವನ ಕರುಳನ್ನು ಕೊರೆದು ಅಲ್ಲಿನ ರಕ್ತನಾಳಗಳನ್ನು ಸೇರುತ್ತವೆ. ರಕ್ತದ ಮಾಧ್ಯಮದಿಂದ ಇವು ಹೃದಯ, ಪುಪ್ಪುಸ, ಶ್ವಾಸನಾಳ ಮತ್ತು ಆಹಾರನಾಳಗಳ ಮೂಲಕ ಕೊನೆಗೆ ಕರುಳನ್ನು ಸೇರುವವು. ಈ ಎಲ್ಲ ಅಂಗಾಂಗಗಳಲ್ಲಿ ಸುತ್ತಾಡಿ ಬರುವಾಗ, ಕೋಶ ಜಾಲಗಳಿಗೆ ಜಖಮುವಾಗುವ ಸಾಧ್ಯತೆ ಹೆಚ್ಚು. ಮುಖ್ಯವಾಗಿ ಮರಿಗಳು (Larvae) ಪುಪ್ಪುಸಗಳಲ್ಲಿ ಸುತ್ತಾಡುವಾಗ ಬಹಳ ಜಖಮುವಾಗಿ, ಬ್ಯಾಕ್ಟೇರಿಯಾಗಳ ಸೋಂಕು ಆ ಅಂಗಕ್ಕೆ ತಗಲುವ ಸಾಧ್ಯತೆ ಹೆಚ್ಚು. ಪ್ರಮುಖ್ಯವಾಗಿ ಪುಪ್ಪುಸಕ್ಕೆ ಟ್ಯೂಬೂರಕ್ಯೂಲ್ಯಾಸಿಸ್ ಬ್ಯಾಕ್ಟೇರಿಯಾಗಳ ಸೋಂಕು ತಗಲಿ ಟಿ.ಬಿ. ಆಗುವ ಸಂಭವವಿದೆ. ಈ ಎಲ್ಲ ಪರಿಕ್ರಿಯೆಯಲ್ಲಿ ಅವನು ಸಾಕಷ್ಟು ಕಳೆದುಕೊಂಡು ನಿಸ್ತೇಜನಾಗಿ, ಯಾವ ಚಟುವಟಿಕೆಗಳನ್ನು ತೋರಿಸುವ ಸ್ಥಿತಿಯಲ್ಲಿರುವದಿಲ್ಲ.

ಕೊಕ್ಕೆ ಹುಳುಗಳು ಮನುಷ್ಯನ ಕರುಳಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿರುವದಿಲ್ಲವಾದರೂ, ಅವುಗಳಿಂದಾಗುವ ಹಾನಿ ಅಪಾರವಾಗಿದೆ. ಆದ್ದರಿಂದ ನಾವು ಆಹಾರ ಮತ್ತು ಕೊಕ್ಕೆ ಹುಳುಗಳ ತತ್ತಿಗಳಿಂದ ಮತ್ತು ಮರಿಗಳಿಂದ ಕಲುಷಿತವಾಗದಂತೆ ನೋಡಿದಲ್ಲಿ, ನಾವು ಅನೇಕ ರೋಗಗಳಿಂದ ಸಂರಕ್ಷಿಸಿಕೊಂಡಂತಾಗುವುದು.

## ೮. ಮನುಷ್ಯನ ಕರುಳಿನಲ್ಲಿ ಸೂಜಿಹುಳುಗಳು (Pin worm infection)

ಸೂಜಿ ಹುಳುಗಳು ಮನುಷ್ಯನ ಕರುಳು, ಅಪೆಂಡಿಕ್ಸ

(appendix) ಮತ್ತು ಸೀಕಂ (Caecum) ಭಾಗಗಳಲ್ಲಿ ಪರತಂತ್ರ ಜೀವಿಗಳಾಗಿ ಬಾಳುತ್ತವೆ. ಈ ಹುಳುಗಳು ಕೊಕ್ಕೆ ಹುಳುಗಳಂತೆ ಗಂಡು ಮತ್ತು ಹೆಣ್ಣುಗಳ ಉದ್ದದಲ್ಲಿ ಭಿನ್ನತೆ ಹೊಂದಿರುತ್ತವೆ. ಇವುಗಳಲ್ಲಿ ಗಂಡು 3.5 mm ಉದ್ದ ವಿದ್ದರೆ ಹೆಣ್ಣು 10mm ಉದ್ದವಾಗಿರುತ್ತವೆ. ಇವುಗಳ ಮುಂಭಾಗದ ತುದಿ ಎರಡು ರೆಕ್ಕೆಗಳಂತಿರುವ ಭಾಗ ಹೊಂದಿರುವುದರಿಂದ ಮೊಂಡಾಗಿ ಕಾಣುತ್ತವೆ. ಮತ್ತು ಹಿಂದಿನ ತುದಿ ಚೂಪಾಗಿರುತ್ತವೆ. ಗಂಡಿನ ಹಿಂದಿನ ತುದಿ ಸರಳವಾಗಿರದೇ, ಗಂಡು ಜಂತು ಹುಳುವಿನಂತೆ ಸ್ವಲ್ಪ ವಕ್ರವಾಗಿರುತ್ತದೆ.

ಇವುಗಳ ಪ್ರಜನನ ಕ್ರಿಯೆ ಮನುಷ್ಯನ ಕರುಳಿನಲ್ಲಿಯೇ ನಡೆಯುತ್ತದೆ, ವೀರ್ಯಾಣುಗಳಿಂದ ನಿಶೇಚನಗೊಂಡ ತತ್ತಿಗಳು, ಮರಿಗಳನ್ನು ಕರುಳಿನಲ್ಲಿಯೇ ಬಿಡುಗಡೆ ಮಾಡುತ್ತವೆ. ಅವು ಮುಂದೆ ನಿಧಾನವಾಗಿ ಗುದದ್ವಾರದ ಕಡೆಗೆ ಚಲಿಸಲು ಪ್ರಾರಂಭಿಸುತ್ತವೆ. ಈ ಹಂತದಲ್ಲಿ ಅವು ನಾಲ್ಕು ಸಾರೆ ರೂಪು ಪರಿವರ್ತನೆ ಹೊಂದುತ್ತವೆ. (mouth 4 times) ನಂತರ ಪ್ರೌಢ ಜೀವಿಗಳಾಗಿ ಬೆಳೆಯುತ್ತವೆ. ಕೆಲವು ಸಾರೆ ಬೆಳೆಯುವ ಮರಿಗಳು ಗುದದ್ವಾರದಿಂದ ಹೊರಬಂದು ತೊಡೆಯ ಸಂದಿನಲ್ಲಿ ಹಾಗು ಗುದದ್ವಾರದ ಸುತ್ತಲಿನ ಸಂದಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೇರಿ, ವಿಪರೀತ ತುರುಸುವಿಕೆಗೆ ಕಾರಣವಾಗಿ ಮನುಷ್ಯನ ಉಗುರ ಸಂದಿನಲ್ಲಿ ಆಶ್ರಯ ಪಡೆದು ಮುಂದೆ ಆಹಾರದ ಮುಖಾಂತರ ಕರುಳನ್ನು ಸೇರಿ ಪ್ರಜನನ ಕ್ರಿಯೆಯಿಂದ ತಮ್ಮ ಸಂಖ್ಯಾಭಿವೃದ್ಧಿ ಮಾಡಿಕೊಳ್ಳುವವು.

ಇವುಗಳಿಂದ ಹರಡುವ ರೋಗ ಒಬ್ಬ ರೋಗಿಯಿಂದ ಮನೆಯ ಎಲ್ಲ ಜನರಿಗೆ ಬಟ್ಟೆ, ಕುರ್ಚಿ, ಗಾಳಿ ಮತ್ತು ಧೂಳಿಕಣಗಳ ಮುಖಾಂತರ ಹರಡುವುದು.

ಈ ಮುಂಚೆ ತಿಳಿಸಿದಂತೆ ಈ ಹುಳುಗಳ ಚಲನವಲನೆಯಿಂದ ಗುದದ್ವಾರದ ಸುತ್ತಲಿನ ಭಾಗದಲ್ಲಿ ವಿಪರೀತ ತುರಿಸುವಿಕೆಗೆ ಕಾರಣವಾಗುವುದು. ಇದರಿಂದ ಆ ಭಾಗ ಬಹಳ ಜಖಮಗೊಳ್ಳುವುದು. ಇದಲ್ಲದೆ ದೊಡ್ಡ ಕರುಳಿನ ಪೊರೆ ಜಖಮಗೊಂಡು ವಿಪರೀತ ನೋವಿಗೆ ನಾಂದಿ ಹಾಕುವುದು. ಇವು ಕರುಳಿನಲ್ಲಿಯ ಅಪೆಂಡಿಕ್ಸ (appendix) ಭಾಗದಲ್ಲಿ ಕೇಂದ್ರಿಕೃತವಾದಾಗ ರೋಗಿಗೆ ವಿಪರೀತ ನೋವು ಅನುಭವಿಸಬೇಕಾಗುತ್ತದೆ. ಇದರಿಂದ ರೋಗಿ ಹಸಿವೆ ಕಳೆದುಕೊಂಡು ನಿಸ್ತೇಜ ಹಾಗು ನಿಶಕ್ತನಾಗುವನು.

ಸೂಜಿಹುಳುಗಳ ಹರಡುವಿಕೆಯನ್ನು ತಡೆಯಬೇಕಾದರೆ, ರೋಗಿಯೂ ಉಟ್ಟ ಬಟ್ಟೆಗಳನ್ನು ಬಿಸಿನೀರಿನಲ್ಲಿ ಪ್ರತ್ಯೇಕ ತೋಯಿಸಿ ಒಗೆಯಬೇಕು. ಅವನು ಉಪಯೋಗಿಸುವ ಕುರ್ಚಿ, ಟೇಬಲ್ಲ.ಸಬಕಾರ, ಟಾವೆಲ್ ಮುಂತಾದ ವಸ್ತುಗಳನ್ನು ಉಪಯೋಗಿಸದೆ ಇರುವುದು ಲೇಸು. ರೋಗಿಯೂ ಡಾಕ್ಟರ ಸಲಹೆಯನ್ನು ಪಡೆದು ಯೋಗ್ಯ ಔಷಧೋಪಚಾರ ಪಡೆದು ಗುಣಹೊಂದಬೇಕು.

## ೯. ಲಾಡಿಹುಳುವಿನ ರೋಗ (Taeniasis)

ಲಾಡಿಹುಳುವು ಚಪ್ಪಟ್ಟೆಹುಳುಗಳ ಒಳ್ಳೆಯ ಉದಾರಣೆಯಾಗಿದೆ. ಇವು ಬೆನ್ನೆಲುಬುಗಳುಳ್ಳ (ಕಶೇರುಕಗಳ) ಪ್ರಾಣಿ

ಗಳ ಕರುಳಿನಲ್ಲಿ ಪರತಂತ್ರ ಜೀವಿಗಳಾಗಿರುವುದರಿಂದ ಶರೀರ ರಚನೆಯಲ್ಲಿ ವಿಶೇಷವಾದ ಬದಲಾವಣೆಗಳನ್ನು ತೋರಿಸುತ್ತವೆ. ಇವುಗಳಲ್ಲಿ ಪಚನ ಮಂಡಲ, ಇಂದ್ರಿಯ ಕೋಶಗಳಾವುಗಳಿಲ್ಲ. ಹಂದಿಯ ಮಾಂಸ ತಿನ್ನುವ ಮನುಷ್ಯರ ಸಣ್ಣ ಕರುಳಿನಲ್ಲಿ ಟೀನಿಯಾ ಸೋಲಿಯಂ (Taenia solium) ಪ್ರಭೇದ ಪರ ತಂತ್ರ ಜೀವಿಗಳಾಗಿ ಬಾಳಿದರೆ, ಟೀನಿಯಾ ಸ್ಯಾಜಿನಾಟಾ (Taenia Saginata) ಪ್ರಭೇದ ದನದ ಮಾಂಸವನ್ನು ತಿನ್ನುವ ಜನರ ಕರುಳಿನಲ್ಲಿ ಪರತಂತ್ರ ಜೀವಿಗಳಾಗಿ ಬಾಳುತ್ತವೆ. ಲಾಡಿ ಹುಳುವಿನ ಸೋಂಕು ಭಾರತ ಮತ್ತು ಪೂರ್ವ ಐರೋಪ್ಯ ದೇಶಗಳ ಜನಾಂಗಗಳಲ್ಲಿ ಇರುತ್ತದೆ. ನಾರುಹುಳುವಿನ ಜೀವನ ಚಕ್ರದಲ್ಲಿರುವಂತೆ ಲಾಡಿಹುಳುವಿನ ಜೀವನ ಚಕ್ರದಲ್ಲಿ ಎರಡು ಆಶ್ರಯ ಜೀವಿಗಳಿರುತ್ತವೆ. ಇದರ ಜೀವನ ಚಕ್ರದ ಮೊದ ಲನೆಯ ಹಂತ ಹಂದಿಯ ಮಾಂಸಖಂಡಗಳಲ್ಲಿ ಹಾಗೂ ಮುಂದಿನ ಹಂತ ಮನುಷ್ಯನ ಕರುಳಿನಲ್ಲಿ ರೂಪುಗೊಳ್ಳುತ್ತದೆ. ಹೀಗೆ ಇದರ ಜೀವನ ಚಕ್ರದಲ್ಲಿ ಎರಡು ಆಶ್ರಯ ಜೀವಿಗಳು ಕಶೇರುಕಗಳೇ ಆಗಿವೆ. ಆದರೆ ಕಾರಲು ಹುಳುವಿನ (Livar-flake) ಜೀವನ ಚಕ್ರದಲ್ಲಿ ಒಂದು ಅಕಶೇರುಕ (ಶಂಖಹುಳ) ಹಾಗೂ ಒಂದು ಕಶೇರುಕ (ಕುರಿ)ಗಳಾಗಿರುತ್ತವೆ.

ಪ್ರೌಢವಾದ ಲಾಡಿಹುಳು ಮನುಷ್ಯನ ಸಣ್ಣಕರುಳಿನ ಒಳ ಪೊದರಿಗೆ ಕೊಕ್ಕೆ (Hooks)ಮತ್ತು ಹೀರು ಬಟ್ಟಲುSackers ಗಳಿರುವ ಸ್ಕೊಲೆಕ್ಸ (Scolex) ಭಾಗದಿಂದ ಅಂಟಿಕೊಂಡಿದ್ದು, ಉಳಿದ ಉದ್ದವಾದ ಭಾಗ ಕರುಳಿನಲ್ಲಿ ಜೀರ್ಣವಾದ ಆಹಾರದಲ್ಲಿ

ತೇಲಾಡುತ್ತದೆ. ಇದರ ಮೇಲೆ ಜೀರ್ಣರಸಗಳ ಪ್ರಭಾವ ವಾಗದಿರಲಿಕ್ಕೆ ಅದರ ಮೇಲಿರುವ ಕ್ಯೂಟಿಕಲ್ (Cuticle) ಪೊರೆ ಮತ್ತು ಅವು ಪ್ರಸ್ರವಿಸುವ ಆ್ಯಂಟಿ ಎಂಜೈಮುಗಳೇ ಕಾರಣ.

ಲಾಡಿಹುಳು ಪರತಂತ್ರ ಜೀವಿಯಾಗಿ ಬಾಳಲು ಅನೂ ಕೂಲವಾಗಿರುವಂತೆ ರಚನೆಗಳ ಮಾರ್ಪಾಡು ಹೊಂದಿದ ನಿದ ರ್ಶನ ಇದರಲ್ಲಿ ಎದ್ದು ಕಾಣುತ್ತದೆ. ಇದರ ಶರೀರ ತೆಳು ವಾಗಿದೆ. ತಲೆ, ಕೈಕಾಲು, ರಕ್ತಪರಿಚಲನಾಂಗ, ಪಚನಮಂಡಲ ಮತ್ತು ನಿಶ್ಚಿತವಾದಂಥ ವಿಸರ್ಜನಾಂಗಗಳಿಲ್ಲ. ಇದು '೯/೨೪' ಉದ್ದವಾಗಿರುತ್ತದೆ. ಇದು ಸಾಮಾನ್ಯವಾಗಿ ಯಾವ ಬಣ್ಣ ಹೊಂದಿರುವದಿಲ್ಲ. ಆದರೆ ಪರಿಸರದಿಂದ ಹೀರಿದ ಬಣ್ಣಗಳಿಂದ ಹಳದಿ ಅಥವಾ ತಿಳುಗುಲಾಬಿ ಬಣ್ಣ ಹೊಂದಿರುತ್ತದೆ, ಇದರ ಶರೀರನಲ್ಲಿ ಅನೇಕ ಸದೃಶ ಖಂಡಗಳಿವೆ. ಈ ಒಂದೊಂದು ಖಂಡದಂತಿರುವ ಭಾಗಕ್ಕೆ ಪ್ರೊಗ್ಲೊಟಿಡ್ (Proglottid) ಎಂದು ಹೆಸರು. ಇಂಥ ಪ್ರೊಗ್ಲೊಟಿಡ್‌ಗಳ ಸಮೂಹಕ್ಕೆ ಸ್ಟ್ರೊಬೈಲಾ (Strobila) ಎಂದು ಹೆಸರು. ವಲಯವಂತಗಳ ಮತ್ತು ಸಂಧಿಪದಿಗಳ ಖಂಡಗಳಿಗೂ ಮತ್ತು ಲಾಡಿಹುಳುಗಳ ಖಂಡಗಳಿಗೂ ಸ್ವಲ್ಪ ವ್ಯತ್ಯಾಸವಿದೆ. ಲಾಡಿಹುಳುಗಳ ಸ್ಕೊಲೆಕ್ಸದ ಹಿಂದಿನ ಖಂಡಗಳು ಚಿಕ್ಕವು ಮತ್ತು ಹೊಸದಾಗಿದ್ದರೆ, ಕೊನೆಯ ಖಂಡ ದೊಡ್ಡದು ಮತ್ತು ಹಳೆಯದಾಗಿರುತ್ತದೆ. ಆದರೆ ವಲಯವಂತಗಳಲ್ಲಿ ಮತ್ತು ಸಂಧಿಪದಿಗಳಲ್ಲಿಯ ಕೊನೆಯಖಂಡ ಹೊಸದಾಗಿರುತ್ತದೆ. ಆದ್ದರಿಂದ ಇದಕ್ಕೆ ಮಿಥ್ಯಖಂಡ ಎಂದು ಹೇಳುತ್ತಾರೆ.

ಸ್ಕೊಲೆಕ್ಸ ಮತ್ತು ಮತ್ತು ಸ್ಟ್ರೊಬೈಲಾಗಳ ನಡುವೆ ಇಕ್ಕಟ್ಟಾದ ಕೊರಳು ಇರುತ್ತದೆ. ಸ್ಕೊಲೆಕ್ಸದ ಹಿಂಭಾಗದ ಪ್ರೊಗ್ಲೊಟಿಡ್‌ಗಳು ತುಂಬಾ ಸಣ್ಣವು. ಆದರೆ ಈ ಭಾಗದಿಂದ ಹಿಂದೆ ಸರಿದಂತೆ ಖಂಡಗಳು ಕ್ರಮೇಣ ದೊಡ್ಡದಾಗುತ್ತ ಹೋಗುತ್ತವೆ. ಕೊರಳಿನ ಹಿಂದೆ ಹೊಸ ಖಂಡಗಳು (ವಲಯುಗಳು) ಸಮಯಾನುಸಾರವಾಗಿ ಹುಟ್ಟುತ್ತಿರುತ್ತವೆ. ಹೀಗೆ ಹೊಸ ಪ್ರೊಗ್ಲೊಟಿಡಗಳ ಹುಟ್ಟುವಿಕೆಯು ಕ್ರಮಕ್ಕೆ ಸ್ಟ್ರೊಬೈಲೈಝೇಶನ್ Strobilization) ಎಂದು ಹೆಸರು. ಒಂದು ಪ್ರೌಢವಾದ ಲಾಡಿ ಹುಳುವಿನಲ್ಲಿ ಸುಮಾರು ೮೦೦ಕ್ಕೂ ಮಿಕ್ಕಿ ಖಂಡಗಳಿರುತ್ತವೆ. ಹೊಸ ಖಂಡಗಳು ಹುಟ್ಟಿದಂತೆ ಹಳೆಯ ಖಂಡಗಳು ಕಳಚಿ ಹೋಗಿ, ಅವುಗಳ ಸಂಖ್ಯೆ ಮತ್ತು ಉದ್ದ ಸೀಮಿತವಾಗಿರು-ತ್ತದೆ. ಮುಂಭಾಗದ ಖಂಡಗಳು ಆಕಾರದಲ್ಲಿ ದುಂಡಾಗಿದ್ದರೆ ಹಿಂದಿರುವ ಖಂಡಗಳು ನಾಲ್ಕು ಮೂಲೆಯ ಚೌಕೋನಾಕಾರ-ವನ್ನು ಹೊಂದಿರುತ್ತವೆ.

ಲಾಡಿ ಹುಳುವಿನ ಮುಂಭಾಗವು ಗುಂಡು ಸೂಜಿಯ ಗುಂಡಿನ ಆಕಾರದ ಸ್ಕೊಲೆಕ್ಸನ್ನು (Scolex) ಹೊಂದಿರುತ್ತದೆ. ಇದು ಆಶ್ರಯ ಜೀವಿಯ ಕರುಳಿಗೆ ಗಟ್ಟಿಯಾಗಿ ಅಂಟಿಕೊಳ್ಳಲು ಸಹಾಯಕವಾಗುತ್ತದೆ. ಇದರ ಮುಂದಿನ ತುದಿಯಲ್ಲಿ ಮುಂಚಾಚುವ ಶಕ್ತಿ ಇರುವ ರೊಸ್ಟೆಲ್ಲಮ್ (Rostellum) ಎಂಬ ಭಾಗ ಇದೆ. ಇದರ ಬುಡದಲ್ಲಿ ಎರಡು ವರ್ತುಳ ಪಂಕ್ತಿಗಳಲ್ಲಿ ಸಂಯೋಜನೆ ಹೊಂದಿದ ೨೮–೩೦ ಕೈಟಿನ ಯುಕ್ತ ಕೊಕ್ಕೆ-ಗಳಿರುತ್ತವೆ. ಒಳಗಿನ ವರ್ತುಳದಲ್ಲಿರುವ ಕೊಕ್ಕೆಗಳ ಉದ್ದ

೧೬೦-೧೮೦m. ಆದರೆ ಹೊರ ವರ್ತುಲದ ಕೊಕ್ಕೆಗಳು ಸ್ವಲ್ಪ ಸಣ್ಣದಾಗಿರುತ್ತವೆ. ಈ ಸಣ್ಣ ಮತ್ತು ದೊಡ್ಡದಾದ ಕೊಕ್ಕೆಗಳು ಪರ್ಯಾಯವಾಗಿ ಸಂಯೋಜನೆ ಹೊಂದಿರುತ್ತವೆ. ಸ್ಕೊಲೆಕ್ಸದ ವ್ಯಾಸ ೧mm ಇರುತ್ತದೆ. ಸ್ಕೊಲೆಕ್ಸದಲ್ಲಿ ನಾಲ್ಕು ಹೀರು ಬಟ್ಟಲುಗಳಿರುತ್ತವೆ. ಈ ಹೀರು ಬಟ್ಟಲುಗಳು ಸ್ನಾಯು ಪುಷ್ಟಿತವಾಗಿರುತ್ತವೆ.

ಲಾಡಿಹುಳು ಯಾವಾಗಲೂ ಜೀರ್ಣವಾದ, ದೇಹಗತ ವಾಗಬಲ್ಲ ಆಹಾರದಲ್ಲಿಯೇ ತೇಲಾಡುತ್ತಿರುತ್ತದೆ ಮತ್ತು ಅದು ತನ್ನ ದೇಶದ ಖಂಡಗಳ ಹೊರಮೈಯಿಂದ ಆಹಾರವನ್ನು ಹೀರುತ್ತದೆ ಈ ಆಹಾರ ಭಾಗವು ಗ್ಲುಕೋಜ. ಅಮೈನೊ ಆಮ್ಲ ಮತ್ತು ಫ್ಯಾಟಿ ಆಮ್ಲಗಳ ರೂಪದಲ್ಲಿರುವುದರಿಂದ ಆಹಾರ ಜೀರ್ಣಿಸುವ ಅಂಗ ಬೇಕಾಗಿಲ್ಲ. ಆದ್ದರಿಂದಲೇ ಲಾಡಿ ಹುಳುವಿನಲ್ಲಿ ಜೀರ್ಣಾಂಗಗಳಿಲ್ಲ. ಹೆಚ್ಚಾದ ಆಹಾರ ಭಾಗವನ್ನು ಗ್ಲುಕೋಜಿನ ರೂಪದಲ್ಲಿ ದೇಹದಲ್ಲಿ ಶೇಖರಣೆಯಾಗುತ್ತದೆ. ಲಾಡಿಹುಳುವಿನಲ್ಲಿ ಉಸಿರಾಡುವ ವಿಶೇಷವಾದ ಅಂಗಗಳು ಇಲ್ಲ. ಇದು ಇರುವ ಆಶ್ರಯ ಜೀವಿಯ ಕರುಳಿನಲ್ಲಿ ಇಂಗಾಲದ ಡೈಆಕ್ಸೈಯಿಡ್, ಕೊಬ್ಬು ಆಮ್ಲಗಳು ಇದ್ದು ಆಮ್ಲಜನಕದ ಪ್ರಮಾಣ ಕಡಿಮೆ ಇರುತ್ತದೆ. ಆದ್ದರಿಂದ ಉಸಿರಾಡುವಿಕೆ ಅನಏರೋಬಿಕ್(anaerobic respiration) ಮಾದರಿಯಿಂದ ನಡೆಯುತ್ತದೆ.

ಲಾಡಿಹುಳುವು ದ್ವಿಲಿಂಗ ಪ್ರಾಣಿ. ಪ್ರತಿಯೊಂದು ಖಂಡಿ ನಲ್ಲಿ ಗಂಡು ಮತ್ತು ಹೆಣ್ಣು ಜನನೇಂದ್ರಿಯಗಳಿರುತ್ತವೆ. ಮುಂಭಾಗದ ೨೦೦ ಖಂಡಗಳಲ್ಲಿ ಜನನೇಂದ್ರಿಯಗಳೇ ಇರುವ

ದಿಲ್ಲ. ಅವುಗಳ ಹಿಂಭಾಗದ ಖಂಡಗಳಲ್ಲಿ ಗಂಡು ಜನನೇಂದ್ರಿಯು ಗಳಿದ್ದರೆ ಇವುಗಳ ಮುಂದಿನ ಖಂಡಗಳಲ್ಲಿ ಎರಡು ಜನನೇಂದ್ರಿಯುಗಳಿರುತ್ತವೆ. ಈ ರೀತಿಯ ಜನನೇಂದ್ರಿಯುಗಳ ಹಂಚುವಿಕೆಗೆ ಪ್ರೊಟ್ರಾಂಡ್ರಸ (Protandrus) ಮಾದರಿಯು-ದೆಂದು ಕರೆಯುವುದುಂಟು. ಬಹಳ ಹಿಂಭಾಗದ ಖಂಡಗಳಲ್ಲಿ ಜನನೇಂದ್ರಿಯುಗಳು ಬೆಳೆದು, ಬಲಿತು, ಗರ್ಭಕಟ್ಟಿದ ತತ್ತಿ-ಗಳನ್ನು ಹಾಗು ಭ್ರೂಣವನ್ನು ಹೊತ್ತು ಪಕ್ವವಾಗಿರುತ್ತವೆ. ಒಂದು ಲಾಡಿಹುಳುವು ಪ್ರತಿದಿನ ೭,೨೦,೦೦೦ ತತ್ತಿಗಳನ್ನು ಉತ್ಪತ್ತಿ ಮಾಡುವುದು.




ಲಾಡಿ ಹುಳುವಿನ ಜೀವನ ಚಕ್ರ

ಸಾಧಾರಣವಾಗಿ ಹಿಂಭಾಗದ ಖಂಡಗಳು ಬೆಳೆದು, ಬಲಿತು ಪ್ರೌಢವಾಗಿರುವುದರಿಂದ, ಅವುಗಳಲ್ಲಿ ಗಂಡು ಮತ್ತು ಹೆಣ್ಣು ಜನನೇಂದ್ರಿಯುಗಳೆರಡು ಚೆನ್ನಾಗಿ ಬೆಳೆದಿರುತ್ತವೆ. ಒಂದೇ ಖಂಡದ ತತ್ತಿಗಳು ಮತ್ತು ವೀರ್ಯಾಣುಗಳು ಪರಿಪಕ್ವವಾಗಲು ಬೇಕಾಗುವ ಸಮಯದ ಅಂತರ ಬಹಳ ಇರುವುದರಿಂದ ಒಂದೇ ಖಂಡಿನ ವೀರ್ಯಾಣುಗಳು ಅಲ್ಲಿಯೇ ಇರುವ ತತ್ತಿಗಳನ್ನು ನಿಶೇಚನಗೊಳಿಸುವುದು ದುಸ್ತರ. ಸಾಮಾನ್ಯವಾಗಿ ಹೆಣ್ಣು ಜನನೇಂದ್ರಿಯುಗಳು ಪಕ್ವವಾಗುವುದಕ್ಕೆ ಮೊದಲೇ ಗಂಡು ಜನನೇಂದ್ರಿಯುಗಳು ಬಲಿತು ಪಕ್ವವಾಗುವವು. ಈ ರೀತಿಯಿಂದ ಹಿಂಭಾಗದ ಖಂಡಗಳಲ್ಲಿ ಹೆಣ್ಣು ಜನನೇಂದ್ರಿಯುಗಳು ಮತ್ತು ಮುಂಭಾಗದ ಖಂಡಗಳಲ್ಲಿ ಗಂಡು ಜನನೇಂದ್ರಿಯುಗಳು ಪಕ್ವವಾಗಿರುತ್ತವೆ. ಸಂಭೋಗ ಕಾಲದಲ್ಲಿ ಹುಳುವು ಹಲವು ಬಾರಿ ಮುದುಡಿ ಅನೇಕ ಖಂಡಗಳು ಒಂದಕ್ಕೊಂದು ಸಂಬಂಧ ಕಲ್ಪಿಸಿಕೊಳ್ಳುತ್ತವೆ. ಇಂಥ ಪರಿಸ್ಥಿತಿಯಲ್ಲಿ ಒಂದು ಖಂಡದ ಜನನೇಂದ್ರಿಯುಗಳಿಂದ ಶಿಶ್ನದ ಮೂಲಕ ವೀರ್ಯಾಣುಗಳು ಮತ್ತೊಂದು ಖಂಡಿನ ಗರ್ಭಾಶಯದಲ್ಲಿ ಪ್ರವೇಶಿಸುತ್ತವೆ. ಅಲ್ಲಿ ತತ್ತಿಗಳು ನಿಶೇಚನಗೊಂಡು ಬೆಳೆದಂತೆ ಗರ್ಭಾಶಯ ಗಾತ್ರದಲ್ಲಿ ಬೆಳೆಯುತ್ತದೆ. ಮುಂದೆ ಪರಿಪಕ್ವವಾದ ಇಂಥ ಖಂಡಗಳು ಒಡೆದು ಹೋಗಿ ಭ್ರೂಣಗಳು ಆಶ್ರಯ ಜೀವಿಯ ಮಲದೊಡನೆ ಹೊರಬೀಳುವವು. ಲಾಡಿಹುಳುಗಳು ಉದ್ದವಾಗಿ ಬೆಳೆದಿರುವುದರಿಂದ ಮತ್ತು ಆಶ್ರಯ ಜೀವಿಯನ್ನು ಕೊಲ್ಲುವ ಉದ್ದೇಶ ಈ ಪರತಂತ್ರ ಜೀವಿಗಳಿಗಿರುವದಿಲ್ಲವಾದ್ದರಿಂದ, ಬೇರೆ ಹುಳು ಆ ಸ್ಥಳದಲ್ಲಿ ಜೀವಿಸಿ ಅಂತರ ನಿಶೇಚನೆ ನಡೆಸುವದಿಲ್ಲ.

ಬೆಳವಣಿಗೆಯೂ ಮುಂದುವರಿಯಬೇಕಾದರೆ ತತ್ತಿಯು ಮಧ್ಯವರ್ತಿ ಆಶ್ರಯ ಜೀವಿಯ ಜಠರವನ್ನು ಸೇರಬೇಕು. ಟೇನಿಯಾ ಸೋಲಿಯಂ ಹುಳುವಿನ ಮಧ್ಯವರ್ತಿ ಆಶ್ರಯಜೀವಿ ಹಂದಿಯಾಗಿರುತ್ತದೆ. ರೋಗಿಯ ಮಲದೊಡನೆ ಬೆರೆತು ಹೊರ ಬೀಳುವ ತತ್ತಿಗಳಾಗಲಿ ಅಥವಾ ಬಲಿತ ಖಂಡಗಳಾಗಲಿ ಅವು ಗಳಿರುವ ಮಲಸೇವನೆಯಿಂದ ಹಂದಿಯು ಜಠರವನ್ನು ಸೇರಿದಾಗ ಭ್ರೂಣದ ಹೊರ ಕವಚವು ಜೀರ್ಣವಾಗಿ ಆರು ಕೊಕ್ಕೆಗಳಿರುವ ಭ್ರೂಣವು ಹೊರಬೀಳುವುದು. ಇದಕ್ಕೆ ಹೆಗ್ಝಕಂಥ ಅಥವಾ ಓಂಕೊಸ್ಪಿಯರ Hexacanth or onchosp here ಎಂದು ಹೆಸರು. ಅನೇಕ ಸಲ ಈ ಭ್ರೂಣಗಳು (ಲಾರವಾ) ನಾಯಿ, ಒಂಟೆ, ಮಂಗಗಳ ಜಠರವನ್ನು ಸಹ ಸೇರುತ್ತವೆ. ಒಂದೊಂದು ಸಾರಿ ಪ್ರೌಢವಾದ ಖಂಡಗಳು ಜಠರದ ಚಲನವಲನದ ಫಲ ವಾಗಿ ಒಡೆದು ಭ್ರೂಣಗಳು ಹೊರಬಿದ್ದು ಬೆಳೆಯುತ್ತವೆ.

ಹೆಗ್ಝಕಂಥ ಲಾರವಾವು ಈಗ ಕೊಕ್ಕೆಗಳ ನೆರವಿನಿಂದ ಕರುಳಿನ ಗೋಡೆಯನ್ನು ಕೊರೆದು ಕ್ರಮೇಣ ರಕ್ತನಾಳ ಅಥವಾ ಲಿಂಫನಾಳಗಳನ್ನು ಸೇರುತ್ತವೆ. ಅಲ್ಲಿಂದ ಇವು ಹೃದಯವನ್ನು ಸೇರಿ ನಾಲಿಗೆಯ, ಯಕೃತ್ತಿನ ಅಥವಾ ಕಣ್ಣಿನ ಪಟ್ಟಿಗಳಿರುವ ಮಾಂಸಖಂಡಗಳ ರಕ್ಷಾಕವಚಗಳೊಂದಿಗೆ ಬಂದು ನೆಲೆಸುವವು. ಭ್ರೂಣದ ಮಧ್ಯದಲ್ಲಿರುವ ಜೀವಕೋಶಗಳು ಕರಗಿ ನೀರಾಗು ವವು. ಇದರಿಂದ ಭ್ರೂಣವು ಅಂಡಾಕಾರದ ಬ್ಲ್ಯಾಡರ ಹುಳು ಅಥವಾ ಸಿಸ್ಟಿ-ಸರ್ಕಸ್(Bladder worm or Cysticarcus) ಆಗಿ ಬೆಳೆಯುತ್ತದೆ. ಹೆಗ್ಝಕಂಥವು ಕೊಕ್ಕೆಗಳನ್ನು ಕಳೆದು

ಕೊಂಡು. ರಕ್ಷಾಕವಚ ಬೆಳೆಸಿ ಹಂದಿಯ ಮಾಂಸಖಂಡಗಳಲ್ಲಿ ಬೆಳೆಯುತ್ತಿರುವಾಗ, ಒಂದು ಕಡೆಯಲ್ಲಿ ಗೋಡೆಯೂ ಒಳ ನೂಕಲ್ಪಡುತ್ತದೆ (invagination)ಆಗ ಅದು ಒಂದು ಚೀಲ ದಂತೆ ಕಾಣುತ್ತದೆ. ಚೀಲದ ಒಳ ಮುಖದಲ್ಲಿ ಪ್ರೌಢಹುಳುವಿನಲ್ಲಿರುವಂಥ ಹೀರುಬಟ್ಟಲು ಮತ್ತು ಕೊಕ್ಕೆಗಳು ಕಾಣಿಸಿ ಕೊಳ್ಳುವವು. ಆ ಚೀಲದ ಕೆಳಭಾಗದಲ್ಲಿರುವ ರಚನೆಗೆ ಪ್ರೊಸ್ಕೊಲೆಕ್ಸ (Pro-Scolex) ಎಂದು ಹೆಸರು. ಇವೆಲ್ಲ ರಚನೆಗಳಿರುವ ಹಂತವೇ ಸಿಸ್ಟಿಸರ್ಕಸ. ಇದು ೬-೧೮mmವ್ಯಾಸ ಉಳ್ಳದ್ದಾಗಿರುತ್ತದೆ. ಈ ಹಂತದ ಲಾರವಾಗಳು ಹಂದಿಯ ಮಾಂಸ ಖಂಡಗಳಲ್ಲಿ ಬಿಳಿ ಚುಕ್ಕೆಗಳಂತೆ ಕಾಣುತ್ತವೆ. ಜೀವನ ಚಕ್ರದ ಮುಂದಿನ ಹಂತಕ್ಕೆ ಬೆಳೆಯಬೇಕಾದರೆ ಇವು ಮನುಷ್ಯನ ಅನ್ನನಾಳವನ್ನು ಸೇರಬೇಕು. ಹಂದಿಯ ದೇಹದಲ್ಲಿ ಈ ಹಂತದ ವರೆಗೆ ಬೆಳೆಯಲು ಅವುಗಳಿಗೆ ೧೧೦ ದಿವಸಗಳು ಬೇಕಾಗುವವು. ಮುಂದೆ ಅವುಗಳಿಗೆ ಮನುಷ್ಯನ ಜಠರ ಸೇರಲು ಅವಕಾಶ ಸಿಗದೆ ಹೋದರೆ ಅವು ಅಲ್ಲಿಯೇ ಸಾಯುವವು. ಸಿಸ್ಟಿಸರ್ಕಸ ಹಂತವಿರುವ ಹಂದಿಯ ಮಾಂಸವನ್ನು ಮನುಷ್ಯರು ಹಸಿ ಬಿಸಿಯಾಗಿ ಕುದಿಸಿ ತಿಂದಲ್ಲಿ, ಕೆಲವು ಲಾರವಾಗಳು ಜೀವಂತ ಉಳಿದು ಮನುಷ್ಯನ ಜಠರವನ್ನು ಸೇರುವವು. ಜಠರದಲ್ಲಿ ರಕ್ಷಾ ಕವಚವು ಜೀರ್ಣವಾಗಿ ಹೊರಬೀಳುವ ಹಂತಕ್ಕೆ ಬ್ಲ್ಯಾಡರ ವೆಸಿಕ್‌ಲ (Bladder Vesicle) ಎಂದು ಹೆಸರು. ಇದರ ಪ್ರೊಸ್ಕೊಲೆಕ್ಸ ಭಾಗವು ಹೊರ ನೂಕಲ್ಪಟ್ಟು, ಸ್ಕೊಲೆಕ್ಸ ಭಾಗವು ರೂಪುಗೊಳ್ಳುವುದು. ಈಗ ಬ್ಲ್ಯಾಡರ ಹುಳುವು ಕರುಳಿನ ಗೋಡೆಗೆ ಕೊಕ್ಕೆಗಳ ಸಹಾಯದಿಂದ ಅಂಟಿಕೊಂಡು

ಕ್ರಮೇಣ ಪ್ರೌಢವಾದ್ಯ ಉದ್ದವಾದ ಲಾಡಿಹುಳುವಾಗಿ ಬೆಳೆಯುವುದು. ಇಂಥ ಹುಳು ಮೂರು ತಿಂಗಳಲ್ಲಿ ಮತ್ತೆ ಹೆಗ್ಗಾ-ಕಂಥಗಳನ್ನು ಹುಟ್ಟಿಸುವ ಯೋಗ್ಯತೆ ಪಡೆಯುತ್ತದೆ.

ಲಾಡಿ ಹುಳುಗಳು ಮನುಷ್ಯನಲ್ಲಿ ಅಲ್ಲದೆ ನಾಯಿ, ಕುರಿ, ಕುದುರೆ ಮುಂತಾದ ಸಾಕು ಪ್ರಾಣಿಗಳಲ್ಲಿ ಪರಾವಲಂಬಿಗಳಾಗಿ ಜೀವಿಸುತ್ತವೆ. ಹಲವು ಸಾರಿ ಹಿಂಡಿನಲ್ಲಿಯ ಕೆಲವು ಕುರಿಗಳು ಗರ್ರನೆ ತಿರುಗಿ ನೆಲದ ಮೇಲೆ ಉಪ್ಪಳಿಸಿ ಕೈಕಾಲುಗಳನ್ನು ತಿಕ್ಕಿ ಸಾಯುವವು. ಇಂಥ ವಿಚಿತ್ರ ರೋಗಕ್ಕೆ ಟೀನಿಯಾ ಸಿನ್ಯೂರ ರಸವೇ (Taenia Calnurus) ಕಾರಣ. ಇವುಗಳ ಜೀವನ ಚಕ್ರದ ಒಂದು ಹಂತವು ಕುರಿಯ ರಕ್ತನಾಳವನ್ನು ಹಾಗು ಮೆದುಳನ್ನು ಸೇರುವವು. ಬಲಿತ ಖಂಡಗಳು ನಾಯಿಯ ಮಲದೊಡನೆ ಹೊರಬಿದ್ದು ಕುರಿಯ ಮೇವನ್ನು ಸೇರಿದರೆ ಅವು ಕುರಿಯ ಜಠರವನ್ನು ಪ್ರವೇಶಿಸಿ ಅದರ ರಕ್ತನಾಳ ಮತ್ತು ಮೆದುಳನ್ನು ಸೇರಿ ಈ ಭಯಂಕರ ರೋಗಕ್ಕೆ ಕಾರಣವಾಗು-ವವು.

ಲಾಡಿಹುಳುವಿನ ಬೆಳವಣಿಗೆಯ ಎರಡು ಹಂತಗಳಾದ ಸಿಸ್ಟಿಸರ್ಕಸ, ಬ್ಲ್ಯಾಡರ ವೆಸಿಕಲ ಹಾಗು ಪ್ರೌಢಾವಸ್ಥೆಯ ಹುಳುಗಳು ಮಾನವ ಜನಾಂಗಕ್ಕೆ ಮಾರಕವಾಗಿವೆ. ಇವು ಆಶ್ರಯ ಜೀವಿಯ ಜೀರ್ಣವಾದ ಆಹಾರದ ಬಹುಪಾಲನ್ನು ಬಳಸುತ್ತವೆ. ಎಂದು ನಂಬಲಾಗಿದೆ. ಆದರೆ ಈ ನಷ್ಟಕ್ಕಿಂತ ಅವು ಕಚ್ಚಿದ ಕರುಳಿನ ಭಾಗದಿಂದ ರಕ್ತ ಸೋರಿ ಬೇರೆ

ಸೋಂಕು ತರುವ ಬ್ಯಾಕ್ಟೀರಿಯಾಗಳಿಂದ ಬರುವ ರೋಗದ ಘಾತುಕತೆಯೇ ಮುಖ್ಯ ಹಾಗು ವ್ಯಾಪಕವಾಗಿರುತ್ತದೆ. ಇವುಗಳ ಸಂಖ್ಯೆ ಕರುಳಿನಲ್ಲಿ ಹೆಚ್ಚಾದಾಗ ಆಹಾರ ಮುಂದೆ ಸಾಗಲಾರದಂತೆ ತಡೆದು, ಆಶ್ರಯಜೀವಿ ಕ್ರಮೇಣ ಭಾರ ಕಳೆದುಕೊಂಡು ಕ್ಷೀಣವಾದ ದೇಹದ ಒಡೆಯನಾಗುತ್ತಾನೆ. ಇಂಥ ಪರಿಸ್ಥಿತಿಯಿಂದ ಹಸಿವೆ ಕಳೆದುಕೊಳ್ಳುವುದು, ದೇಹನೋವು, ಅಜೀರ್ಣ, ವಾಂತಿ, ಭೇದಿ ಮೂರ್ಛೆ ಬರುವಂಥ ಅನೇಕ ತಾಪತ್ರಯಗಳಿಗೆ ಆಶ್ರಯ ಜೀವಿಯು ತುತ್ತಾಗುತ್ತಾನೆ. ಇದಲ್ಲದೆ ಅವುಗಳ ತ್ಯಾಜ್ಯ ವಸ್ತುಗಳು ಆಶ್ರಯ ಜೀವಿಯ ಕರುಳಿನಲ್ಲಿ ವಿಸರ್ಜಿಸಲ್ಪಟ್ಟು, ಅನೇಕ ಜಟಿಲ ಸಮಸ್ಯೆಗಳು ಉದ್ಭವಿಸುವವು. ಇದರ ಬೆಳವಣಿಗೆಯ ಹಂತಗಳು ಮೆದುಳು, ಕಣ್ಣು ಮುಂತಾದ ಪ್ರಾಮುಖ್ಯವಾದ ಅಂಗಾಂಗಗಳನ್ನು ಸೇರಿದರೆ, ಸಮಸ್ಯೆಗಳ ಜಟಿಲತೆಗೆ ಸೀಮೆ ಉಳಿಯುವದಿಲ್ಲ. ಆದ್ದರಿಂದ ಇದರ ಬೆಳವಣಿಗೆಯ ಹಂತಗಳನ್ನು ನಾಶಮಾಡಿ ಈ ರೋಗದ ಹರಡುವಿಕೆಯನ್ನು ತಡೆಯಬಹುದು. ದನಗಳ ಮತ್ತು ಹಂದಿಯ ಮಾಂಸವನ್ನು ಸರಿಯಾಗಿ ಕುದಿಸಿ ತಿಂದರೆ ಅವುಗಳ ಭ್ರೂಣ ಮನುಷ್ಯನ ಕರುಳನ್ನು ಸೇರುವದನ್ನು ತಡೆಯಬಹುದು. ಇದಲ್ಲದೆ ಕಾರ್ಬನ ಟೆಟ್ರಾಕ್ಲೋರಾಯಿಡ್ (Carbon Tetrachloride) ಮತ್ತು ಎಸಪೇಡಿಯಂ ದಂಥ (Aspidium) ಔಷಧಿಗಳನ್ನು ಉಪಯೋಗಿಸಿ ಕರುಳಿನಲ್ಲಿರುವ ಈ ಹುಳುಗಳನ್ನು ಕೊಲ್ಲಬಹುದು. ಒಟ್ಟಾರೆ ಈ ಹುಳುವಿನಿಂದ ಮಾನವ ಜನಾಂಗಕ್ಕೆ ಆಗುವ ಕಷ್ಟ

ಕಾರ್ಪಣ್ಯಗಳನ್ನು ಅನುಲಕ್ಷಿಸಿ ರೋಗದ ಹರಡುವಿಕೆಯನ್ನು ನಿಯಂತ್ರಿಸದಿದ್ದರೆ ತಪ್ಪಾದೀತು.

## ೧೦. ಮೈಲಿ ಬೇನೆ (Small Pox)

ಮಾನವನ ಸಂಸ್ಕೃತಿಯ ಬೆಳವಣಿಗೆಯೊಂದಿಗೆ ಮೈಲಿ ಬೇನೆಯೂ ಬೆಳೆದು ಬಂದಿದೆ. ಇದು ಒಂದು ತರದ ವೈರಸ್‌ದಿಂದ ಬರುವುದು. ಪ್ರತಿವರ್ಷ ಮೈಲಿ ಬೇನೆಯಿಂದ ಸಾಯು-ವವರ ಸಂಖ್ಯೆ, ಕಣ್ಣು, ಕಿವಿ ಮುಂತಾದ ಅಂಗಾಂಗಗಳನ್ನು ಕಳೆದು ಕೊಳ್ಳುವವರ ಸಂಖ್ಯೆ ಲಕ್ಷಗಳಲ್ಲಿರುತ್ತಿತ್ತು. ವೈಜ್ಞಾನಿಕ ಸಂಶೋಧನೆಗಳಿಂದ ಇವರ ಪೂರ್ಣ ನಿರ್ಮೂಲವಾಗಿದೆ. ಗಾಳಿಯಲ್ಲಿರುವ ಮೈಲಿಬೇನೆ ತರುವ ವೈರಸ್ ಆರೋಗ್ಯವಂತನ ದೇಹ ಸೇರಿ ಅವನ ಜೀವಕೋಶವಲ್ಲಿ ಆಶ್ರಯ ಪಡೆದು ತಮ್ಮ ಸಂಖ್ಯೆ ಹೆಚ್ಚಿಸಿಕೊಳ್ಳುವವು. ಆಗ ರೋಗಿಯಲ್ಲಿ ಪ್ರತಿರೋಧಾತ್ಮಕ ಶಕ್ತಿ ಕಡಿಮೆ ಆಗಿ, ವೈರಸ್‌ಗಳು ಮೇಲುಗೈ ಸಾಧಿಸಿದಾಗ ರೋಗಿಗೆ ಬಹಳ ಜ್ವರ ಬಂದು ಮೈಮೇಲೆಲ್ಲ ಕೆಂಪು ಗಾದರೆ ಬರುವವು. ಮುಂದೆ ೪-೫ ದಿವಸಗಳಲ್ಲಿ ಅವು ಹುಣ್ಣುಗಳಾಗಿ ಪರಿಣಮಿಸಿ ಕೀವು ತುಂಬುವವು. ಆಗ ಅವು ಒಡೆದು ಕೀವು ಮತ್ತು ತಿಳುನೀರಿನ ಲಸಿಕೆ ಪಕ್ಕದ ಭಾಗಕ್ಕೆ ಪಸರಿಸಿ ಅಲ್ಲಿ ಬೇರೆ ಹುಣ್ಣಾಗುವ ಸಾಧ್ಯತೆ ಉಂಟು. ಸಕಾಲದಲ್ಲಿ ಮೈಲಿ ಬೇನೆ ನಿರೋಧಕ ಔಷಧಿ ಸಿಗದಿದ್ದರೆ ರೋಗಿ ಸಾಯಬಹುದು; ಅಥವಾ ಕಣ್ಣು,ನೋಡುವ ಶಕ್ತಿ ಹಾಗೂ ಕಿವಿಕೇಳುವ ಶಕ್ತಿ ಕಳೆದು ಕೊಂಡು ಕಾಯಂ ಕುರುಡನೋ ಅಥವಾ ಕಿವುಡನೋ ಆಗು-

ವನು. ಅವನು ಗುಣವಾದರೂ ಮೈಮೇಲಿನ ಹುಣ್ಣಿನ ಭಾಗಗಳು ಕಾಯಂ ತಗ್ಗು ಹೊಂದಿ ಮುಖದ ಸುಂದರತೆಗೆ ಕುಂದು ತರುವುದು.

ಈಚಿನ ೨-೩ ದಶಕಗಳಲ್ಲಿ ಆಂತರಾಷ್ಟ್ರಿಯ ಆರೋಗ್ಯ ಸುಸ್ಥೆ (World Health Organization), ಈ ರೋಗದ ಭೀಕರತೆಯನ್ನು ಅರಿತು ಮೈಲಿ ಬೇನೆ ನಿರೋಧಕ ಲಸಿಕೆ ಜಗತ್ತಿನ ಮೂಲೆ ಮೂಲೆಗೆ ಪೂರೈಸಿ ಈ ರೋಗ ಇಲ್ಲವಂತೆ ಮಾಡಿದೆ ಸಾಮಾನ್ಯವಾಗಿ ನಾವು ಬಸ್ಸಿನಲ್ಲಿ ಅಥವಾ ರೈಲಿನಲ್ಲಿ ಪ್ರಯಾಣಿಸುತ್ತಿದ್ದಾಗ ಹಳ್ಳಿಯಲ್ಲಿಯ ಮನೆಗೆ ಹಾಗೋಡೆಯ ಮೇಲೆ ಬರೆದ ವಿಷಯ "ಮೈಲಿ ಬೇನೆ ಹೊಂದಿದ ರೋಗಿಯ ಸುಳಿವು ಕೊಟ್ಟಲ್ಲಿ ೧೦೦೦ ರೂಪಾಯಿಯ ಬಹುಮಾನ" ನಾವು ನೋಡುತ್ತೇವೆ. ಅಂದ ಮೇಲೆ ಮನುಷ್ಯನು ಈ ಭಯಂಕರ ರೋಗದ ಮೇಲೆ ಹಿಡಿತ ಸಾಧಿಸಿದ್ದಾನೆಂದು ಗೊತ್ತಾಗುತ್ತದೆ. ಇದೇ ತರಹ ನಮ್ಮ ವಿಜ್ಞಾನಿಗಳು ಉಳಿದಿರುವ ಅನೇಕ ರೋಗ ರುಜಿನಗಳ ಮೇಲೆ ಯಶಸ್ವಿ ಔಷಧಿಗಳನ್ನು ಕಂಡು ಹಿಡಿಯುವ ದಿವಸ ದೂರಿಲ್ಲವೆಂದು ಆಶಿಸೋಣ. ಇಂದಿನ ಮಕ್ಕಳು ಮೂರು ತಿಂಗಳದವರಿದ್ದಾಗಲೇ ಅವರಿಗೆ ಮೈಲಿ ಬೇನೆ ನಿರೋಧಕ ಲಸಿಕೆ ಯನ್ನು (ಚುಚ್ಚುಮದ್ದನ್ನು) ಕೊಟ್ಟಿರುತ್ತಾರೆ. ಆದ್ದರಿಂದ ಅವರಲ್ಲಿ ಆ ರೋಗದ ಪ್ರತಿರೋಧಕಶಕ್ತಿ ಬಂದು, ಆ ರೋಗದ ಸೋಂಕು ತಾಗಿದಾಗ, ಆ ವೈರಸ್‌ಗಳನ್ನು ಪ್ರತಿರೋಧಕ ಕಣ ಗಳು ತಿಂದು ಬಿಡುತ್ತವೆ. ಹೀಗೆ ಈಗ ಮೈಲಿಬೇನೆ ಎಲ್ಲಿಯೂ ಕಾಣುವದಿಲ್ಲ.

ಇನಫ್ಲುಯೆಂಝಾ (Influanza) : ಇಂದಿನ ಕಾಲ

ದಲ್ಲಿ ನಾವು ಭಾರತಿಯರು ವಿದೇಶಿಯರ ಸರಕು ಸಾಮಾನು ಗಳಿಗೆ ಮರಾರು ಹೋಗಿದ್ದೇವೆ. ನಮ್ಮ ಸಾಮಾನುಗಳು ಎಷ್ಟೇ ಗುಣ ಮಟ್ಟ ಹೊಂದಿದ್ದರೂ ನಾವು ವಿದೇಶಿ ಸಾಮಾನುಗಳ ವ್ಯಾಮೋಹ ಇನ್ನೂ ಬಿಟ್ಟಿಲ್ಲ. ನಾವು ಪ್ರತಿಯೊಂದು ಕ್ಷೇತ್ರದಲ್ಲಿ ಇಂಪೂರ್ಟೆಡ್(Imported) ಎಂದಾಕ್ಷಣ ಬಾಯಿ ತೆರೆಯುವ ಕಾಲ. ಇದೇ ರೀತಿ ನಾವು ಐವತ್ತರ ದಶಕದಲ್ಲಿ ಜಾಪಾನದಿಂದ ಆಮದು ಮಾಡಿಕೊಂಡ "ಫ್ಲು" ತರುವ ವೈರಸ ಇಂದು ಶಾಶ್ವತ ಭಾರತೀಯ ನಾಗರಿಕತ್ವ ಪಡೆದಿದೆ. ಇದು ಕುಟುಂಬದ ಒಬ್ಬರಿಗೆ ಸೋಂಕು ತಾಗಿದರೆ ಎಲ್ಲರಲ್ಲಿ ಈ ರೋಗ, ಸೋಂಕನ್ನು ಹರಡಿಸಿ ಬಿಡುತ್ತದೆ. ಇದರ ಪೂರ್ಣ ಹೆಸರು 'ಇನಫ್ಲುಎಂಝಾ' ಇದ್ದರೂ ಸಾಮಾನ್ಯವಾಗಿ 'ಫ್ಲು' ಎಂದು ಎಲ್ಲರಿಗೆ ಚಿರಪರಿಚಿತ.

ಇನಫ್ಲುಎಂಝಾ ಸೋಂಕು ತಾಗಿದಾಗ ರೋಗಿಗೆ ಬಹಳ ಜ್ವರ ಬರುವುದು. ಮೈಕೈ ನೋವು ವಿಪರೀತ, ಮೂಗು ಸೋರುವಿಕೆ, ಗಂಟಲು ಕೊರೆತ, ಉಸಿರಾಟಕ್ಕೆ ಆತಂಕವಾಗು ವುದು. ರೋಗಿಯೂ ನಿಶಕ್ತನಾಗಿ, ನಿಸ್ತೇಜನಾಗಿ ೧೦-೧೫ ದಿವಸ ಆರೈಕೆ ಪಡೆಯಬೇಕಾಗುವುದು. ಇದು ಹೇಳಿಕೊಳ್ಳ ಲಿಕ್ಕೆ ಅಂಥ ದೊಡ್ಡ ರೋಗವಿರದಿದ್ದರೂ ರೋಗಿಯು ೧೦-೧೫ ದಿವಸಗಳವರೆಗೆ ಇದರ ಪೀಡೆಯಿಂದ ಬಳಲಬೇಕಾಗುತ್ತದೆ. ಮತ್ತೆ ಮೊದಲಿನ ಆರೋಗ್ಯ, ಉತ್ಸಾಹ ಪಡೆಯಲು ತಿಂಗಳು ಕಳೆಯಬೇಕು. ಕೊನೆಗೆ ಆಮದು ಮಾಡಿಕೊಂಡ ವೈರಸ್ ಬೇಡ ವಾಗಿದ್ದರೂ ನಮ್ಮದಾಗಿ ಬಿಟ್ಟಿದೆ. ಇದರ ಉಪಚಾರಕ್ಕಾಗಿ ಲಸಿಕೆ ತಯಾರಿಸಲು ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ.

# ೧೧. ಹುಚ್ಚು ನಾಯಿ ಕಡಿತದಿಂದ ಬರುವ ಹೈಡ್ರೊಫೋಬಿಯಾ ರೋಗ

(Hydrophobia Disease)

ರೇಬಿಸ (Rabies) ವೈರಸ ನಾಯಿಯಲ್ಲಿ ಇದ್ದಾಗ ರೇಬಿಸ ರೋಗವೆಂದು ಮನುಷ್ಯನಲ್ಲಿ ಹೈಡ್ರೊಫೋಬಿಯಾ ಎಂದು ಕರೆಯುತ್ತೇವೆ. ಹೈಡ್ರೊಫೋಬಿಯಾ ಎಂದರೆ ನೀರಿಗೆ ತಿರಸ್ಕಾರ ಎಂದರ್ಥ. ರೋಗಿಗೆ ಎಷ್ಟು ನೀರಡಿಕೆಯಾದರೂ ನೀರು ಸಮೀಪ ಒಯ್ದರೆ ಎಲ್ಲ ಶಕ್ತಿಯಿಂದ ತಿರಸ್ಕರಿಸುತ್ತಾನೆ. ಹುಚ್ಚುನಾಯಿ ಕಡಿತದಿಂದ ಆರೋಗ್ಯವಂತನ ದೇಹ ಸೇರಿದ ವೈರಸ ರೋಗದ ರೂಪದಲ್ಲಿ ಹೊರಬರಲು ಕೆಲವು ದಿವಸಗಳಿಂದ ಕೆಲವು ತಿಂಗಳು ಬೇಕು.

ಭಾರತ ದೇಶದಲ್ಲಿ ಹುಚ್ಚುನಾಯಿ ಕಡಿತದಿಂದ ಸಾಯು ವವರ ಸಂಖ್ಯೆ ಸಾವಿರಾರು. ಹೋದ ಶತಮಾನದಲ್ಲಿ ಫ್ರೆಂಚ್ ದೇಶದ ವಿಜ್ಞಾನಿ ಲೂಯಿಸ ಪ್ಯಾಶ್ಚರನು (Louis Pasteur) ಈ ರೋಗದ ಲಸಿಕೆಯನ್ನು ಯಶಸ್ವಿಯಾಗಿ ತಯಾರಿಸಿದನು. ಈ ರೋಗವು ಒಂದು ವೈರಸದಿಂದ ಬರುತ್ತದೆ. ಒಳ್ಳೆಯ ಆರೋಗ್ಯ ಹೊಂದಿದ ನಾಯಿ ಹುಚ್ಚು ನಾಯಿಯ ಕಡಿತಕ್ಕೆ ಒಳಪಟ್ಟರೆ, ಅದರ ಲಾಲಾರಸದಿಂದ ಒಳ್ಳೆಯ ಆರೋಗ್ಯದಿಂದಿ ರುವ ನಾಯಿಯ ಮೈ ಸೇರಿ, ಅದರ ಜೀವಕೋಶದಲ್ಲಿ ಸಂಖ್ಯೆ ಹೆಚ್ಚಾಗಿ ಕೊನೆಗೆ ಅದರ ನರಕೋಶ ಜಾಲ ಮತ್ತು ಮೆದುಳನು ಸೇರಿ ಆ ಭಾಗಗಳು ವಿಕೃತಗೊಳ್ಳುತ್ತವೆ. ಇದರಿಂದ ನರ ಸಂಸ್ಥೆ

ದೇಹದ ಬೇರೆ ಬೇರೆ ಅಂಗಾಂಗಗಳ ಜೊತೆಗೆ ಹೊಂದಿದ ಸಂಯೋಜನೆ ತಪ್ಪಿ ಆರೋಗ್ಯ ಕೆಡುವುದು. ಕೊನೆಯ ಹಂತ-ದಲ್ಲಿ ಅಂತಹ ನಾಯಿ ಹುಚ್ಚು ನಾಯಿಯಂತೆ ವರ್ತಿಸಲಿಕ್ಕೆ ಪ್ರಾರಂಭಿಸುವದು. ಅವನನ್ನು ಹಿಡಿಯುವುದು ಕಷ್ಟಕರ. ಇಂತಹ ಹುಚ್ಚು ನಾಯಿ ಆರೋಗ್ಯವಂತ ಮನುಷ್ಯನನ್ನು ಕಚ್ಚಿದಾಗ ಮೇಲೆ ವಿವರಿಸಿದಂತೆ ಮನುಷ್ಯನ ಮೈಸೇರಿ ಅವನನ್ನು ಹುಚ್ಚು ನಾಯಿಯಂತೆ ಮಾಡುವವು. ಇಂಥ ಪರಿಸ್ಥಿತಿಯಲ್ಲಿ ಅವನು ಬೇರೆ ಆರೋಗ್ಯವಂತರಿಗೆ ಕಚ್ಚಿದಾಗ ಅವರನ್ನು ಕೂಡಾ ಆ ರೋಗಕ್ಕೆ ತುತ್ತಾಗುವಂತೆ ಮಾಡುವನು. ರೋಗಿಯು ಕೊನೆಯ ಹಂತವಲ್ಲಿ ದೀರ್ಘ ಮೂರ್ಛಾವಸ್ಥೆ (Deep Coma) ಹೊಂದಿ ಸಾಯುವನು.

ಹುಚ್ಚು ನಾಯಿಯಿಂದ ಕಡಿಸಿಕೊಂಡ ವ್ಯಕ್ತಿ ಆಸ್ಪತ್ರೆ ಸೇರಿದರೆ, ಕೂಡಲೇ ವೈದ್ಯರು ನಿರ್ದಿಷ್ಟ ಹಾಗು ಉಚಿತವಾದ ಚಿಕಿತ್ಸೆ ಕೊಡುತ್ತಾರೆ. ಮೊದಲು ಅವರು ನಾಯಿ ಹುಚ್ಚು ಇದೆಯೋ ಅಥವಾ ಒಳ್ಳೆಯ ನಾಯಿ ಆಕಸ್ಮಿಕವಾಗಿ ಕಡಿ-ದಿದೆಯೋ ಎನ್ನುವ ವಿಷಯ ಅವರ ಮನೆಯವರಿಂದ ಖಾತ್ರಿ ಮಾಡಿಕೊಳ್ಳುತ್ತಾರೆ. ಆಮೇಲೆ ಸೂಕ್ತವೆನಿಸಿದ ಚಿಕಿತ್ಸೆ ಅಂದರೆ, ಎಷ್ಟುಬೇಕು ಅಷ್ಟು ಲಸಿಕೆಯನ್ನು ಇಂಜೆಕ್ಷನ್ ಮೂಲಕ ಹೊಕ್ಕಳಿನ ಸುತ್ತಲು ೭ ದಿವಸಗಳಾಗಲಿ ಅಥವಾ ೧೪ ದಿವಸಗಳಾಗಲಿ ಒಂದೊಂದರಂತೆ ಕೊಟ್ಟು ರೋಗಿಯನ್ನು ಉಳಿಸುತ್ತಾರೆ. ಈ ತರಹ ಸೂಕ್ತ ಸಮಯದಲ್ಲಿ ಯೋಗ್ಯ ಚಿಕಿತ್ಸೆ ಪಡೆದರೆ ಈ ರೋಗದಿಂದ ಯಾರು ಸಾಯುವದಿಲ್ಲ. ಡಾಕ್ಟರರ ಸಲಹೆಯಂತೆ

ದಿನಾಲು ಇಂಜೆಕ್ಷನ ತೆಗೆದು ಕೊಳ್ಳುವದನ್ನು ತಪ್ಪಿಸಿದರೆ ನಾವು ನಿಶ್ಚಿತ. ಇಂಥ ಭಯಂಕರ ರೋಗಕ್ಕೆ ತಕ್ಕ ಮತ್ತು ಯೋಗ್ಯ ಉಪಚಾರ ಕಂಡುಹಿಡಿದ ಮಹಾಪುರುಷ ಲುಯಿಸ ಪ್ಯಾಶ್ಚರನಿಗೆ ಮಾನವ ಕುಲ ಚಿರಋಣಿ.

## ೧೨. ಪೋಲಿಯೋ ರೋಗ (Polio Disease):

ಈ ರೋಗ ಕೂಡಾ ಒಂದು ಜಾತಿಯ ಸೂಕ್ಷ್ಮ ಜೀವಿಯಾದ ವೈರಸದಿಂದ ಬರುತ್ತದೆ. ಈ ರೋಗ ಹೆಚ್ಚಾಗಿ ಎಳೆಯ ಮಕ್ಕಳಲ್ಲಿ ಬರುತ್ತದೆ. ಈ ರೋಗ ತರುವ ವೈರಸ ನಿರ್ದಿಷ್ಟವಾಗಿ ಹುಚ್ಚು ನಾಯಿ ಕಡಿತದ ವೈರಸದಂತೆ ನರ ಸಂಸ್ಥೆ ನಾಶಮಾಡುವ ಯೋಗ್ಯತೆ ಹೊಂದಿರುತ್ತದೆ. ಈ ರೋಗದ ಬಗ್ಗೆ ಅಜ್ಞಾನವು ನಮ್ಮ ನಾಡಿನ ಎಲ್ಲ ಭಾಗದಲ್ಲಿ ಇದೆ ಆದರೆ ವಿದ್ಯಾವಂತರು ತಮ್ಮ ಮಕ್ಕಳು ಆರು ತಿಂಗಳು ದಾಟುವುದರಲ್ಲಿ ಪೋಲಿಯೋ ಮತ್ತು ಟೆಟ್ಯಾನಸ್‌ಗಳಂಥ (Polio & Tetanus) ರೋಗ ಪ್ರತಿರೋಧದ ಲಸಿಕೆ ಕೊಡಿಸುತ್ತಾರೆ. ಆಗ ಆ ಮಕ್ಕಳಲ್ಲಿ ಈ ರೋಗದ ಶಕ್ತಿಶಾಲಿ ವೈರಸ ಬಂದರೂ ಒಮ್ಮೆ ಲಸಿಕೆಯ ನಿಶಕ್ತ ವೈರಸಗಳ ಜೊತೆ ಯುದ್ಧ ಮಾಡಿದ ಅನುಭವದಿಂದ ಅವನ ಬಿಳಿರಕ್ತ ಕಣಗಳು ಯಶಸ್ವಿಯಾಗಿ ಆ ವೈರಸಗಳನ್ನು ನಿರ್ನಾಮ ಮಾಡುತ್ತವೆ. ಆದರೆ ತಂದೆತಾಯಿಗಳು ನಿರ್ಲಕ್ಷ ಮಾಡುವುದರಿಂದ ಅಂಥವರ ಮಕ್ಕಳು ಈ ರೋಗಕ್ಕೆ ತುತ್ತಾಗುವ ಸಾಧ್ಯತೆ ಹೆಚ್ಚು.

ಈ ರೋಗದ ಮುಖ್ಯ ಲಕ್ಷಣಗಳೆಂದರೆ, ಆ ರೋಗಿಯ

(ಮಗು) ಕಾಲಿನ ನರಸಂಸ್ಥೆ ನಿಶಕ್ತವಾಗಿ ಅವನ ಕಾಲಿನ ಮಾಂಸ ಖಂಡಗಳು ನಿಶಕ್ತಗೊಂಡು ಚಲನೆಯಲ್ಲಿಯು ತಮ್ಮ ಕಾರ್ಯಸಮರ್ಥವಾಗಿ ನಡೆಸಿಕೊಂಡು ಬರಲು ಸಾಧ್ಯವಾಗುವದಿಲ್ಲ. ಪೋಲಿಯೋ ಆದ ಕಾಲುಗಳು ನಿಶಕ್ತಗೊಂಡು ಸಾಕಷ್ಟು ಮಾಂಸ ಖಂಡಗಳನ್ನು ಕಳೆದುಕೊಳ್ಳುತ್ತವೆ. ಆಗ ಮಗು ತನ್ನ ಕಾಲಿನ ಮೇಲೆ ನಿಲ್ಲುವ ಸ್ಥಿತಿಯಲ್ಲಿರುವದಿಲ್ಲ. ಕಾಲಿನ ಚಲನೆ ಕಳೆದುಕೊಂಡ ಮಗು ತಂದೆತಾಯಿಗಳಲ್ಲದೆ ಸಮಾಜಕ್ಕೆ ಒಂದು ಹೊರೆ. ಅವನು ಬೇರೆಯವರ ಸಹಾಯವಿಲ್ಲದೆ ನಡೆಯುವದಿಲ್ಲ. ಸ್ವತಂತ್ರವಾಗಿ ಜೀವನ ಸಾಗಿಸಲು ಬರುವದಿಲ್ಲ. ಆದ್ದರಿಂದ ಪೋಲಿಯೋ ರೋಗಿಯನ್ನು ಸಕಾಲದಲ್ಲಿ ವೈದ್ಯರ ಕಡೆ ಕರೆದು ಕೊಂಡು ಹೋಗಿ, ಸೂಕ್ತ ಚಿಕಿತ್ಸೆಯನ್ನು ಕೊಡಿಸದಿದ್ದರೆ ಅವನನ್ನು ಅಸಹಾಯಕತೆಯ ಜೀವನದ ದವಡೆಯಿಂದ ಪಾರು ಮಾಡಬಹುದು.

## ೧೩. ಕ್ಯಾನ್ಸರ ಅಥವಾ ಕರ್ಕರೋಗ (Cancer)

ಕ್ಯಾನ್ಸರ ಎಂಬ ರೋಗ ಎಂಥ ಬಲಶಾಲಿಯನ್ನು ಎದೆ-ಗುಂದಿಸುತ್ತದೆ. ಏಕೆಂದರೆ ಇತ್ತಿತ್ತಲಾಗಿ ಈ ರೋಗದಿಂದ ಸಾಯುವವರ ಸಂಖ್ಯೆ ಹೆಚ್ಚುತ್ತಿದೆ. ಈ ರೋಗ ಯಾವ ಪರ-ತಂತ್ರ ಜೀವಿಯಿಂದ (Parasite), ಹೇಗೆ ಬರುತ್ತದೆ ಎಂದು ನಿರ್ದಿಷ್ಟವಾಗಿ ಹೇಳುವ ಹಂತಕ್ಕೆ ಇದರ ಬಗ್ಗೆ ಜ್ಞಾನ ಬೆಳೆದಿಲ್ಲ. ಈ ರೋಗದ ಬಗ್ಗೆ ವೈಜ್ಞಾನಿಕ ಸಂಶೋಧನೆ ತ್ವರಿತಗತಿಯಿಂದ

ನಡೆಯುತ್ತಿದೆ ಆದರೆ ಸಾಕಷ್ಟು ಯಶಸ್ಸು ಸಿಕ್ಕಿಲ್ಲ. ಈ ಹಂತದಲ್ಲಿ ಕ್ಯಾನ್ಸರವೆಂದರೆ ಕರ್ಕರೋಗ ಒಂದು ಜಾತಿಯ ಸೂಕ್ಷ್ಮ ಜೀವಿ ವೈರಸ್‌ದಿಂದ ಬರುತ್ತದೆ ಎಂದು ನಂಬಲಾಗಿದೆ.

ಕ್ಯಾನ್ಸರ ರೋಗವು ದೇಹದ ಯಾವದೇ ಒಂದು ಹೊರ ಪ್ರಚೋದನೆಗೆ ಆ ಅಂಗದ ಕೋಶಗಳು ಒಳಪಟ್ಟು, ಅನಿಯಂತ್ರಿತ ರೀತಿಯಲ್ಲಿ ಬೆಳವಣಿಗೆ ತೋರಿಸಿ ದೊಡ್ಡಗಂಟು ಅಥವಾ ಗಡ್ಡೆಯಾಗಿ ಪರಿಣಮಿಸುವುದು. ಆಗ ಆ ಸಂಸ್ಥೆ ತನ್ನ ಕಾರ್ಯ ನಡೆಸದೆ, ಪಕ್ಕದ ಅಂಗಕ್ಕೆ ಹೊರೆಯಾಗಿ ದೇಹದ ಎಲ್ಲ ಕ್ರಮಗಳನ್ನು ಕ್ರಮೇಣ ಕ್ಷೀಣಿಗೊಳಿಸಿ ರೋಗಿಯನ್ನು ಸಾವಿಗೀಡು ಮಾಡುತ್ತದೆ. ಅವು ವೈಯಕ್ತಿಕವಾಗಿ ಆಗಲಿ ಅಥವಾ ಸಾಮೂಹಿಕವಾಗಿರಬಹುದು. ಮೇಲೆ ಹೇಳಿದಂತೆ, ಈ ದಿಶೆಯಲ್ಲಿ ವೈಜ್ಞಾನಿಕ ಆಧಾರಗಳು ಇನ್ನು ಲಭ್ಯವಿಲ್ಲ.

ಒಬ್ಬ ವ್ಯಕ್ತಿಗೆ ಬಾಯಿಯ ಕ್ಯಾನ್ಸರ ಆಗಲು, ಅವನು ತನ್ನ ಬಾಯೀಯನ್ನು ಹೇಗೆ ಉಪಯೋಗಿಸುತ್ತಿದ್ದನೆಂಬುವ ಅಂಶ ಮುಖ್ಯ. ಒಂದು ವೇಳೆ ಅವನಿಗೆ ಸತತವಾಗಿ ಎಲೆ, ಅಡಿಕೆ, ತಂಬಾಕು ತಿನ್ನುವ ಅಭ್ಯಾಸವಿದ್ದರೆ, ಬಾಯಿಯ, ನಾಲಿಗೆಯ ಕೋಶಗಳು ತಂಬಾಕಿನಲ್ಲಿರುವ ನಿಕೋಟಿನ ಅಂಶದ ಪ್ರಚೊದನೆಗೆ ಒಳಗಾಗಿ ಅಥವಾ ಎಲೆ ಅಡಿಕೆಗಳಲ್ಲಿರುವ ಅನೇಕ ರಾಸಾಯನಿಕಗಳ ಪ್ರಚೋದನೆಗೆ ಒಳಪಟ್ಟು ಅವು ತಮ್ಮ ಕೋಶಗಳ ಸಂಖ್ಯೆಯನ್ನು ಅನಿಯಂತ್ರಿತ ರೀತಿಯಲ್ಲಿ ಹೆಚ್ಚಿಸುವುದರಿಂದ ಬಾಯಿಗೆ ಕ್ಯಾನ್ಸರ ರೋಗ ಬರುತ್ತದೆ. ಈ ರೋಗ

ಮೊದಲಿನ ಹಂತಗಳಲ್ಲಿಯೇ ಗುರುತಿಸಿದರೆ ಸೂಕ್ತ ಚಿಕಿತ್ಸೆ ಕೊಟ್ಟು ಗುಣಪಡಿಸಬಹುದು. ಆದರೆ ತಡವಾದಾಗ ಅನಿಯಂತ್ರಿತ ಬೆಳವಣಿಗೆಗೆ ಒಳಗಾಗಿ (malignant), ಕ್ಯಾನ್ಸರ ಕೋಶಗಳು ರಕ್ತದ ಮೂಲಕ ದೇಹದ ಬೇರೆ ಭಾಗಕ್ಕೆ ಹೋಗಿ ಅಲ್ಲಿ ಪುನಃ ಅನಿಯಂತ್ರಿತ ಬೆಳವಣಿಗೆಗೆ ಪ್ರಚೋದನೆ ಮಾಡು-ವವು. ಆ ಹಂತದಲ್ಲಿ ಚಿಕಿತ್ಸೆ ಅವನ ಸಾವನ್ನು ಮುಂದೂಡುವ ಕ್ರಮದಲ್ಲದೆ ಜೀವ ಉಳಿಸುವದಂಥಲ್ಲ. ಆದ್ದರಿಂದ ಜನರು ತಮ್ಮ ದೇಹವು ಕಾರ್ಯ ಮಾಡುವ ವಿಧಿಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬಂದರೆ ಯೋಗ್ಯ ವೈದ್ಯರಿಂದ ತಪಾಸಿಸಿಕೊಳ್ಳುವುದು ಉಚಿತ.

ರಕ್ತದ ಕ್ಯಾನ್ಸರದ ಬಗ್ಗೆ (Blood Cancer) ಹೇಳಬೇಕಾದರೆ ಕ್ಯಾನ್ಸರ ರೋಗಗಳು ಎಲುಬಿನ ಮಧ್ಯದಲ್ಲಿರುವ ಕೆಂಪುರಕ್ತಕಣ ತಯಾರಿಸುವ ಕೇಂದ್ರವನ್ನು ಆವರಿಸಲ್ಪಡು-ತ್ತವೆ. ಕೆಂಪುರಕ್ತಕಣಗಳ ಉತ್ಪಾದನೆ ಕಡಿಮೆ ಆಗಿ, ಬಿಳಿರಕ್ತ ಕಣಗಳ ಸಂಖ್ಯೆ ಅನಿಯಂತ್ರಿತವಾಗಿ ಬೆಳೆದು, ರಕ್ತ ಕೆಂಪು ರಕ್ತ ಕಣಗಳನ್ನು ಕಾಣದೇ ಕೇವಲ ಬಿಳಿ ರಕ್ತಕಣಗಳ ಆಗರವಾಗುತ್ತದೆ. ಕೆಂಪು ರಕ್ತಕಣಗಳು ಪ್ರಾಮುಖ್ಯವಾಗಿ ಪ್ರಾಣವಾಯುವನ್ನು ಎಲ್ಲ ಕೋಶಗಳಿಗೆ ಮುಟ್ಟಿಸುತ್ತವೆ. ಈ ಕೆಲಸಕ್ಕೆ ಚ್ಯುತಿ ಬಂದು, ದೇಹದ ಎಲ್ಲ ಕಾರ್ಯಕ್ರಮಗಳು ಕುಂಠಿತವಾಗಿ ಕೊನೆಗೆ ರೋಗಿ ಸಾವಿಗೆ ತುತ್ತಾಗುವನು ನಮ್ಮ ಯುವ ವೈದ್ಯರಿಗೆ, ಸಂಶೋಧಕರಿಗೆ ಕ್ಯಾನ್ಸರವು ಒಂದು ಸವಾಲು ಒಡ್ಡಿದೆ.

## ೧೪. ಕರುಳಿನಲ್ಲಿ ಹುಣ್ಣಾಗುವಿಕೆ
(Hyper acidity & intestinal ulcers)

ಈ ರೋಗವು ಅನ್ನನಾಳ ಹಾಗು ಜಠರದಲ್ಲಿ ಹೈಡ್ರೊಕ್ಲೋರಿಕ್ ಆಮ್ಲದ ಉತ್ಪಾದನೆ ಹೆಚ್ಚಾದಾಗ, ಜಠರದಲ್ಲಿ ಮತ್ತು ಕರುಳಿನಲ್ಲಿ ಹುಣ್ಣಾಗುವವು ಆಹಾರ ಜಠರದಲ್ಲಿ ಬಂದಾಗ ಸ್ವಲ್ಪ ಸಮಾಧಾನವಾಗುತ್ತದೆ. ಆದರೆ ಹೈಡ್ರೊಕ್ಲೋರಿಕ್ ಆಮ್ಲದಿಂದ ಹುಣ್ಣುಗಳು ಉರಿಯಲು ಪ್ರಾರಂಭಿಸುವವು. ಆಗ ನೋವು ಹೆಚ್ಚುವುದು. ಇದಕ್ಕೆ ನಿಯಮಿತ ಸಮಯದಲ್ಲಿ ಆಹಾರ ತೆಗೆದುಕೊಳ್ಳದೇ ಇರುವುದು (irregularity in food) ಬಹಳ ಊಟ ಮಾಡುವುದು (Heavy meals), ಸಿಗರೇಟು ಸೇದುವುದು. ಸಿಂದಿ, ಸೆರೆ ಮುಂತಾದ ಪಾನೀಯಗಳ ಚಟ ಹೊಂದಿರುವುದೇ ಕಾರಣ. ಇದರಿಂದ ರೋಗಿಯೂ ಸೋಮಾರಿಯಾಗಿ, ಚೈತನ್ಯರಹಿತನಾಗುವನು. ಅವನಿಗೆ ಊಟಮಾಡುವ ಇಚ್ಛೆ ಇರುವದಿಲ್ಲ. ಇಂಥ ಪರಿಸ್ಥಿತಿಯಲ್ಲಿ ರೋಗಿಯೂ ಎಣ್ಣೆಯಲ್ಲಿ ಕರೆವ ವಸ್ತುಗಳನ್ನು ಹಾಗೂ ಮಸಾಲೆ ಸಾಮಾನುಗಳನ್ನು ಹಾಗೂ ಉಪ್ಪಿನಕಾಯಿಯನ್ನು ತಿನ್ನುವುದು ಬಿಡಬೇಕು. ಔಷಧೋಪಚಾರದಿಂದ ಹುಣ್ಣುಗಳು ಮಾಯುವಂತೆ ನೋಡಿಕೊಳ್ಳಬೇಕು.

## ೧೫. ಕಾಮಣಿರೋಗ ಅಥವಾ ಕಾಮಾಲೆ ರೋಗ (Jaundice or Hepatitis)

ಕೆಲವು ಬ್ಯಾಕ್ಟೇರಿಯಾ ಮತ್ತು ವೈರಸಗಳಿಂದ ಆಹಾರ ಮತ್ತು ನೀರಿಗೆ ಸೋಂಕು ತಾಗಿ ನಾವು ಅದನ್ನು ಸೇವಿಸಿದಾಗ,

ಈ ರೋಗಾಣುಗಳು ಯಕೃತ್‌ನ್ನು ಸೇರಿ, ಅವುಗಳ ಕಾಯ
ಪದ್ಧತಿ ಮೇಲೆ ಸಂಹಾರ ಮಾಡುತ್ತವೆ. ಸಾಮಾನ್ಯವಾಗಿ ಈ
ರೋಗ ಮಳೆಗಾಲದಲ್ಲಿ ಬರುತ್ತದೆ. ಈ ರೋಗದ ಸೋಂಕ
ತಾಗಿದಾಗ ಯಕೃತ್ತಿನಲ್ಲಿ ತ್ಯಾಜ್ಯ ವಸ್ತುವಾಗಿ ತಯಾರಾ
ಪಿತ್ತರಸ ಕರುಳನ್ನು ಸೇರಿ ದೇಹದ ಹೊರಗಡೆ ಹೋಗದೆ, ರಕ
ದಲ್ಲಿ ಸೇರುತ್ತದೆ. ಆಗ ಮೈಬಣ್ಣ, ಉಗುರು, ಕಣ್ಣಿನ ಗುಡ್ಡೆಯ
ಬಿಳಿಯ ಭಾಗ ಹಳದಿಯಾಗಿ ಕಾಣುವುದು, ಅವನಿ
ಜ್ವರ ಬಂದು ಊಟಮಾಡುವ ಇಚ್ಛೆ ಕಳೆದುಕೊಂಡು ನಿಸ್ತೇಜ-
ನಾಗುವನು. ಆದ್ದರಿಂದ ರೋಗಿಯೂ ವೈದ್ಯರಿಂದ ಸೂಕ
ಸಲಹೆಯನ್ನು ಪಡೆದು ರಕ್ತದಲ್ಲಿನ ಪಿತ್ತರಸ ದೇಹದ ಹೊ
ಹೋಗುವಂತೆ ಪ್ರಯತ್ನಿಸಬೇಕು. ಯಕೃತ್ತಿನಲ್ಲಿ ಕೇಂದ್ರಿಕೃತ
ವಾಗಿರುವ ಬ್ಯಾಕ್ಟೇರಿಯಾಗಳನ್ನು ನಿಯಂತ್ರಿಸಲೂ ಯೋಗ
ಔಷಧಿ ಪಡೆಯಬೇಕು. ಇಂಥ ರೋಗಿಗೆ ವೈದ್ಯರು ಎಣ್ಣೆಯಲ್ಲಿ
ಕರೆದ ವಸ್ತುಗಳನ್ನು ಪೂರ್ಣ ತ್ಯಜಿಸಿ ಕೇವಲ ಬಿಳಿ ಜೋಳದ
ರೊಟ್ಟೆ ಮತ್ತು ಬೆಲ್ಲ ಸೇವಿಸುವಂತೆ ಸಲಹೆ ಮಾಡುತ್ತಾರೆ
ಆಲೋಪಥಿಯ Liv. 52 ಅಥವಾ ಆಯುರ್ವೇದ ಔಷಧಿ-
ಗಳನ್ನು ಅವಲಂಬಿಸಬೇಕು.

## ೧೬. ಅಧಿಕ ರಕ್ತದ ಒತ್ತಡದ ರೋಗ
### (High blood Pressure)

ಇದು ಬಹುತೇಕ ಶಹರದ, ಶ್ರೀಮಂತರ ರೋಗವಾಗಿ-
ರುತ್ತದೆ. ಏಕೆಂದರೆ ಹಳ್ಳಿಯುವರ ಮೂಲಭೂತ ಬೇಡಿಕೆಗಳಾದ

ಆಹಾರ, ಬಟ್ಟೆ, ವಸತಿ ಇಂದಿನ ದಿನಗಳಲ್ಲಿ ಪೂರ್ತಿ ಆಗುತ್ತಿವೆ. ಆದರೆ ಶಹರದ ಜನರು ದೈಹಿಕ ಸುಖಕ್ಕಾಗಿ ಹೆಚ್ಚೆಚ್ಚು ಆಸೆ ಮಾಡಿ ಇಂಥ ರೋಗಗಳನ್ನು ಆಮಂತ್ರಿಸಿದಂತೆ ಸರಿ. ಇದಕ್ಕೆ ಬಹಳಷ್ಟು ಕಾರಣಗಳಿದ್ದರೂ, ಅವಿಯಮಿತ ಆಹಾರ ತೆಗೆದು ಕೊಳ್ಳುವುದು, ಊಟದಲ್ಲಿ ಕೊಬ್ಬಿನ ಮತ್ತು ಉಪ್ಪಿನ ಅಂಶ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸುವುದು, ಸರಿಯಾಗಿ ವಿಶ್ರಾಂತಿ ಪಡೆಯದೇ ಇರುವುದು, ಬಹಳ ಚಿಂತೆಮಾಡುವುದು ಮುಂತಾದವುಗಳೇ ಮುಖ್ಯ ಕಾರಣಗಳು. ನಮ್ಮ ನಿತ್ಯ ಜೀವನ ದಲ್ಲಿ ಅನಿಯಮಿತತೆ ಇದ್ದರೆ ಹೊಸ ಹೊಸ ರೋಗಗಳನ್ನು ತರಿಸಿಕೊಂಡಂತೆಯೇ ಸರಿ. ನಾವು ಹೆಚ್ಚೆಚ್ಚು ಆಶೆಗಳನ್ನಿಟ್ಟು ಕೊಂಡು, ಅವು ಪೂರ್ತಿ ಆಗದೆ ಹೋದಾಗ ರಕ್ತದಲ್ಲಿ ಅಡ್ರೆಲಿನದ (Adrelin) ಅಂಶ ಹೆಚ್ಚಾಗಿ ರಕ್ತದ ಒತ್ತಡ ಹೆಚ್ಚುತ್ತದೆ. ಇದ ರಿಂದ ಹೃದಯದ ಮೇಲೆ ಹೆಚ್ಚು ಭಾರಬಿದ್ದು ಹೃದಯವೇ ನಿಂತು ಹೋಗುವ ಸಾಧ್ಯತೆ ತಳ್ಳಲ್ಲಿಕ್ಕಾಗದು. ರಕ್ತದಲ್ಲಿ ಉಪ್ಪಿನ ಅಂಶ ಮತ್ತು ಕೊಲೇಸ್ಟ್ರಾಲ್‌ದ (Cholostrol) ಅಂಶ ಹೆಚ್ಚಿ- ದರು ಕೂಡಾ ಈ ರೋಗ ಬರುತ್ತದೆ. ಒಟ್ಟಾರೆ ನಿಯತಕಾಲಿಕ ಚಟುವಟಿಕೆಗಳು ಯೋಗ್ಯ ರೀತಿಯಲ್ಲಿ ನಡೆಸಿಕೊಂಡು ಹೋದರೆ ನಾವು ಈ ರೋಗದಿಂದ ಪಾರಾದಂತೆ ಈ ರೋಗಿಗೆ ಸರಿಯಾಗಿ ನಿದ್ರೆ ಬರುವದಿಲ್ಲ. ನಿದ್ರೆ ಇಲ್ಲದಾಗ ಸಕಲ ಅಂಗಾಂಗ ಹಾಗೂ ಅವುಗಳ ಜೀವಕೋಶಗಳಿಗೆ ತಕ್ಕ ವಿಶ್ರಾಂತಿ ಸಿಗುವದಿಲ್ಲ, ಅಂದ ಮೇಲೆ ನಾವು ಅವುಗಳ ಕಾರ್ಯ ಚಟುವಟಿಕೆ ಯಶಸ್ವಿಯಾಗಿ ನಡೆಸಿಕೊಂಡು ಹೋಗಬೇಕೆಂದು ಆಶಿಸುವುದು ತಪ್ಪಾದೀತು.

ಮನುಷ್ಯನ ದೇಹದ ವಿವಿಧ ಅಂಗ ಉಪಅಂಗ ಸಂಸ್ಥೆಗಳು ವಿವಿಧ ರೀತಿಯ ರೋಗ ರುಜಿನಗಳಿಗೆ ತುತ್ತಾಗುತ್ತವೆ. ಆದ್ದರಿಂದ ಪ್ರತಿಯೊಂದು ರೋಗವನ್ನು ಇಲ್ಲಿ ಚರ್ಚಿಸುವುದು ಆಗುವದಿಲ್ಲ ಮುಖ್ಯವಾಗಿ ಬ್ಯಾಕ್ಟೇರಿಯಾ ಮತ್ತು ವೈರಸ್‌ಗಳಿಂದ ಅನೇಕ ರೋಗರುಜಿನಗಳು ಮನುಷ್ಯನಿಗೆ ಬರುತ್ತವೆ. ಅವುಗಳ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ. ಒಂದೊಂದು ರೋಗದ ಬಗ್ಗೆ ವಿಷಯ ಚರ್ಚಿಸಿದಾಗ, ಒಂದು ಪುಸ್ತಕದಷ್ಟು ವಿಷಯ ಸಂಗ್ರಹಣೆಯಾಗುವುದು. ಆದ್ದರಿಂದಲೇ ಗ್ರಾಮೀಣ ಭಾಗದ ಜನರಲ್ಲಿ ಸಾಮಾನ್ಯವಾಗಿ ಬರುವ ರೋಗರುಜಿನಗಳ ಲಕ್ಷಣ, ಅವುಗಳಿಗೆ ಪರಿಹಾರೋಪಾಯ ವಿಷಯಗಳನ್ನು ನಿವೇದಿಸುವುದು ಈ ಕಿರು ಹೊತ್ತಿಗೆಯ ಉದ್ದೇಶ. ಸಂಕ್ಷಿಪ್ತದಲ್ಲಿ ಅವುಗಳನ್ನು ತಿಳಿಸುವ ಪ್ರಯತ್ನಮಾಡಿದ್ದೇನೆ.

---

## ಬ್ಯಾಕ್ಟೀರಿಯಾದಿಂದ ಬರುವ ರೋಗಗಳು

೧) ಪ್ಲೇಗು (Plague)
೨) ಕಾಲರಾ (Cholara)
೩) ಡಿಪ್ಥೇರಿಯಾ (Diptheria)
೪) ಸಿಫಿಲಿಸ (Syphilis) ಲೈಂಗಿಕ
೫) ಗೋನೊರಿಯಾ (Gonorrhea) ರೋಗಗಳು
೬) ಕುಷ್ಟರೋಗ (Leprosy)
೭) ಟಿಟ್ಯಾನಸ (Tetanus)
೮) ಟ್ಯೂಬರ ಕುಲೋಸಿಸ (Tuber Culosis)
೯) ಟೈಫೊಯಿಡ್ (Typhoid)
೧೦) ನಾಯಿಕೆಮ್ಮು (Whooping Cough)
೧೧) ಮೆನಿಂಜೈಟಿಸ (Meningitis)
೧೨) ನಿಮೋನಿಯಾ (Pneumonia)
೧೩) ಡಿಸೆಂಟ್ರಿ (Dysentery)
೧೪) ಅಬಸೆಸ್ಸ (Abscesses)
೧೫) ಹಲ್ಲು ಹುಳುಕಾಗುವುದು (Pyorrhea)

## ವೈರಸ್‌ದಿಂದ ಬರುವ ರೋಗಗಳು

೧) ಮೈಲಿ ಬೇನೆ (Small pox)
೨) ಚಿಕನ್‌ಪಾಕ್ಸ (Chicken pox)
೩) ಮಂಗನ ಬಾವು (Mumps)
೪) ಗೊಬ್ಬರ ಬರುವುದು (Measles)
೫) ಹಳದಿ ಜ್ವರ (Yellow fever)
೬) ಹುಚ್ಚುನಾಯಿ ಕಡಿತ (Hydrophobia)

೭) ಫ್ಲ (lafluenza)
೮) ವೈರಸ್ ನಿಮೋನಿಯಾ (Viral pneumonia)
೯) ನೆಗಡಿ, ಶೀತ (Common Cold)
೧೦) ಮಕ್ಕಳ ಲಖವಾ (Infantile Paralysis)
೧೧) ಎನಸಿಫ್ಯಾಲಿಟಿಸ್ (Encephalitis)
೧೨) ವೈರಸ್ ಮೆನಿಂಜೈಟಿಸ್ (Viral meningitis)
೧೩) ಕ್ಯಾನ್ಸರ (Cancer)
೧೪) ಪೋಲಿಯೊ (Polio)

## ಗ್ರಂಥ ಋಣ


1. Biology of Animals Vol-I
   By : Ganguly, Sinha & Adhik

2. A Text-Book of Zoology Vol-I
   By : Vishwana

3. A Text Book of Biology Vol-II
   By : P. Venkatraman
   P. Shantaram
   K. P. Mathai

4. Introduction to Zoology
   By; E. Kambarnath Ayy

## ಉಪನ್ಯಾಸ ಗ್ರಂಥಮಾಲೆಯ ಕೆಲವು ಪ್ರಕಟನೆಗಳು

---



---


ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ